CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೧, ೨೦೦೩ (ಭಾದ್ರಪದ ೨೦, ಶಕ ವರ್ಷ ೧೯೨೫) | ಸಂಚಿಕೆ ೩೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು, ರಾಜಾಜಿನಗರ, ಬೆಂಗಳೂರು-10**

**ಬ್ಯಾಕ್‌ಲಾಗ್ ಹುದ್ದೆ ಭರ್ತಿ ಕುರಿತು ಪ್ರಕಟಣೆ-2**

**ಸಂಖ್ಯೆ: ಸಿಬ್ಬಂದಿ:76:2001-02, ದಿನಾಂಕ: 23ನೇ ಆಗಸ್ಟ್ 2003**

ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು ಇಲಾಖೆಯಲ್ಲಿ ಬಾಕಿಯಿರುವ ಈ ಕೆಳಕಂಡ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಮೂನೆ ಭಾಗ-1 ರಲ್ಲಿ ಅರ್ಜಿ ಸಲ್ಲಿಸಬೇಕು. ಅರ್ಜಿ ಫಾರಂಗಳನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದಾಗಲೀ ಅಥವಾ ಸರ್ಕಾರದಿಂದ ಮನ್ನಣೆ ಪಡೆದ ಪುಸ್ತಕ ಅಂಗಡಿಗಳಿಂದಾಗಲಿ ನಿಗದಿತ ಶುಲ್ಕ ಕೊಟ್ಟು ಪಡೆಯಬಹುದಾಗಿದೆ.

| ಕ್ರ. ಸಂ. | ಹುದ್ದೆಗಳ ಹೆಸರು | ಪ್ರವರ್ಗ | ಸಂಖ್ಯೆ | ವೇತನ ಶ್ರೇಣಿ |
|---|---|---|---|---|
| 1 | ಫಿಜಿಯೋಥೆರಪಿಸ್ಟ್ (ವರ್ಗೀಕರಣ) ಸಾಮಾನ್ಯ | ಪ.ಪಂಗಡ | 01 | 4575-8400 |
| 2 | ರೇಡಿಯೋಗ್ರಾಫರ್ (ವರ್ಗೀಕರಣ) ಸಾಮಾನ್ಯ | ಪ.ಪಂಗಡ | 01 | 3850-7050 |
| 3 | ಡೆಂಟಲ್ ಹೈಜಿನಿಸ್ಟ್ (ವರ್ಗೀಕರಣ) ಸಾಮಾನ್ಯ-1 | ಪ.ಜಾತಿ | 01 | 3300-6300 |
| | ಡೆಂಟಲ್ ಹೈಜಿನಿಸ್ಟ್ (ವರ್ಗೀಕರಣ) ಸಾಮಾನ್ಯ-1 | ಪ.ಪಂಗಡ | 01 | 3300-6300 |

**ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಗಳು:**

1. **ಫಿಜಿಯೋಥೆರಪಿಸ್ಟ್:**

ಅ) ಪಿ.ಯು.ಸಿ. ಯಲ್ಲಿ ವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು ತೇರ್ಗಡೆಯಾಗಿರಬೇಕು

ಆ) ಸರ್ಕಾರದಿಂದ ಮಾನ್ಯತೆ ಪಡೆದಿರುವ ವಿದ್ಯಾ ಸಂಸ್ಥೆಯಲ್ಲಿ ಎರಡು ವರ್ಷಗಳ ಫಿಜಿಯೋಥೆರಪಿ ಕೋರ್ಸ್‌ನಲ್ಲಿ ತೇರ್ಗಡೆ ಹೊಂದಿರಬೇಕು.

2. **ರೇಡಿಯೋಗ್ರಾಫರ್:**

ಅ) ಭೌತಶಾಸ್ತ್ರ ಅಥವಾ ರಸಾಯಶಾಸ್ತ್ರ ವಿಷಯವನ್ನು ಒಳಗೊಂಡ ಪಿ.ಯು.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

ಆ) ಸರ್ಕಾರದಿಂದ ಮಾನ್ಯತೆ ಪಡೆದ ಸಂಸ್ಥೆಯಿಂದ ಕನಿಷ್ಠ 18 ತಿಂಗಳ ರೇಡಿಯೋಗ್ರಾಫರ್ ತರಬೇತಿಯಲ್ಲಿ ತೇರ್ಗಡೆ ಹೊಂದಿರುವ ಬಗ್ಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

3. **ಡೆಂಟಲ್ ಹೈಜಿನಿಸ್ಟ್:**

ಅ) ಎಸ್.ಎಸ್.ಎಲ್.ಸಿ. ಯಲ್ಲಿ ತೇರ್ಗಡೆ ಹೊಂದಿರಬೇಕು. ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

ಆ) ಡೆಂಟಲ್ ಕೌನ್ಸಿಲ್ ಆಫ್ ಇಂಡಿಯಾದಿಂದ ಮಾನ್ಯತೆ ಪಡೆದ ಸಂಸ್ಥೆಯಿಂದ ಡೆಂಟಲ್ ಹೈಜಿನಿಸ್ಟ್ ಕೋರ್ಸ್‌ನಲ್ಲಿ ಪ್ರಮಾಣ ಪತ್ರ ಹೊಂದಿರಬೇಕು.

**ವಯೋಮಿತಿ:**

ಅಭ್ಯರ್ಥಿಗಳು ಕನಿಷ್ಠ 18 ವರ್ಷಗಳು ಪೂರ್ಣಗೊಂಡಿರಬೇಕು. ಅರ್ಜಿ ಸಲ್ಲಿಸಲು ಅಭ್ಯರ್ಥಿಯ ವಯಸ್ಸು ಸರ್ಕಾರದ ಪ್ರಕಟಣೆ ಸಂಖ್ಯೆ: ಡಿಪಿಎಆರ್.13. ಎಸ್.ಬಿ.ಡಿ. ದಿನಾಂಕ: 21.11.2001 ರನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳ ವಯೋಮಿತಿ ಗರಿಷ್ಠ 40 ವರ್ಷಗಳು. ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಈ ಕೆಳಕಂಡ ಪ್ರಮಾಣ ಪತ್ರಗಳನ್ನು ದೃಢೀಕೃತ ಪ್ರತಿಗಳನ್ನು ಸಲ್ಲಿಸತಕ್ಕದ್ದು. (ಅ) ಶೈಕ್ಷಣಿಕ ವಿದ್ಯಾರ್ಹತೆ ಪ್ರಮಾಣ ಪತ್ರಗಳು ಮತ್ತು ಅಂಕಪಟ್ಟಿ (ಸಂಬಂಧಪಟ್ಟ ಪರೀಕ್ಷೆಗಳ ಎಲ್ಲಾ ವರ್ಷದ ಅಂಕಪಟ್ಟಿಯ ಪ್ರತಿ)

ಆ) ಹುಟ್ಟಿದ ತಾರೀಖಿನ ಬಗ್ಗೆ ದೃಢೀಕರಣ ಪ್ರಮಾಣ ಪತ್ರ.

ಇ) ಅಭ್ಯರ್ಥಿಗಳು ಕಲಿತ ಕಾಲೇಜು: ಶಾಲೆ: ಸಂಸ್ಥೆಯ ಮುಖ್ಯಸ್ಥರು ಕೊಟ್ಟಿರುವ ನಡತೆ ಪ್ರಮಾಣ ಪತ್ರ.

ಈ) ಅಭ್ಯರ್ಥಿಗಳು ಸರ್ಕಾರದ ಆದೇಶದಂತೆ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ ಮೀಸಲಾತಿ ಪ್ರಮಾಣ ಪತ್ರ.

ಉ) ಅಭ್ಯರ್ಥಿಯ ಇತ್ತೀಚಿನ ಭಾವಚಿತ್ರವನ್ನು ಅರ್ಜಿಯ ಮೇಲೆ ಲಗತ್ತಿಸಬೇಕು.

ಊ) ಮೇಲ್ಕಂಡ ಪ್ರಮಾಣ ಪತ್ರಗಳನ್ನು ಲಗತ್ತಿಸದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು. (ಪ್ರಮಾಣ ಪತ್ರಗಳ ನಕಲು ಪ್ರತಿಗಳನ್ನು ದೃಢೀಕರಿಸಿರಬೇಕು)

ಋ) ಮೇಲ್ಕಂಡ ಹುದ್ದೆಗಳಿಗೆ ಆಯ್ಕೆಯನ್ನು ಸರ್ಕಾರದ ಆದೇಶದನ್ವಯ ಮಾಡಲಾಗುವುದು.

ೠ) ಅರ್ಜಿದಾರರೊಡನೆ ಬೇರೆ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

ಎ) ಆಯ್ಕೆಯಾದ ಅಭ್ಯರ್ಥಿಗಳು ಸರ್ಕಾರ ಆದೇಶಾನುಸಾರ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಹೊರತು ನೇಮಕ ಹೊಂದಲು ಅರ್ಹರಿರುವುದಿಲ್ಲ.

ಏ) ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಭಾಗದಲ್ಲಿ ಕೆಲಸ ಮಾಡಲು ಸಿದ್ಧರಿರಬೇಕು.

ಐ) ಗ್ರಾಮೀಣ: ಯೋಜನೆಗಳಿಂದ ನಿರಾಶ್ರಿತಗೊಂಡ: ಮಾಜಿ ಸೈನಿಕ: ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಂಬಂಧಪಟ್ಟ ಪ್ರಮಾಣ ಪತ್ರಗಳನ್ನು ಸಲ್ಲಿಸುವುದು.

ಒ) ಮೇಲ್ಕಂಡ ಎಲ್ಲಾ ಅಡಕಗಳೊಂದಿಗೆ ಅರ್ಜಿಯನ್ನು ದಿನಾಂಕ: 30.9.2003ರ ಒಳಗಾಗಿ ಈ ಕೆಳಕಂಡ ವಿಳಾಸಕ್ಕೆ ಸಲ್ಲಿಸತಕ್ಕದ್ದು. ಹಾಗೂ ಲಕೋಟೆಯ ಮೇಲೆ ಸ್ಪಷ್ಟವಾಗಿ .............................. ಹುದ್ದೆಗಾಗಿ ಅರ್ಜಿ ಎಂಬುದನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.

**ವಿಳಾಸ:** ನಿರ್ದೇಶಕರು, ಆಯ್ಕೆ ಪ್ರಾಧಿಕಾರ, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು,
ರಾಜಾಜಿನಗರ, ಬೆಂಗಳೂರು-560 010.

ನಿರ್ದೇಶಕರು,
ಕಾ.ರಾ.ವಿ. ಯೋ(ವೈ) ಸೇವೆ.

ಪಿ.ಡಿ. 67

**ಭದ್ರಾವತಿ ಅರಣ್ಯ ವಿಭಾಗ**

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಬಿ2-ಪಾಚೀಲ-15:2003-04, ದಿನಾಂಕ: 20ನೇ ಆಗಸ್ಟ್ 2003**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2003-04ನೇ ಸಾಲಿಗೆ ರಾಷ್ಟ್ರೀಯ ಅರಣ್ಯೀಕರಣ ಕಾರ್ಯಕ್ರಮದ ಯೋಜನೆಯಡಿ ಸಸ್ಯ ಕ್ಷೇತ್ರಗಳಲ್ಲಿ ವಿವಿಧ ಅಳತೆಯ ಪಾಲಿಥಿನ್ ಚೀಲಗಳಲ್ಲಿ ಸಸಿಗಳನ್ನು ಬೆಳೆಸುವ ಸಲುವಾಗಿ ಎಲ್.ಡಿ.ಪಿ.ಇ ಪಾಲಿಥಿನ್ ಚೀಲಗಳನ್ನು ಸ್ವಂತ ಉತ್ಪಾದನಾ ಘಟಕಗಳನ್ನು ಹೊಂದಿರುವಂತಹ ಉತ್ಪಾದಕರಿಂದ ಮೊಹರಾದ ಲಕೋಟೆಯಲ್ಲಿ ಟೆಂಡರ್‌ನ್ನು ದಿನಾಂಕ: 24.9.2003ರ ಮಧ್ಯಾಹ್ನ 4.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ಅಥವಾ ಅವರಿಂದ ಅಧಿಕಾರ ಪಡೆದ ಅಧಿಕಾರಿಗಳು ಸ್ವೀಕರಿಸುವರು.

ಟೆಂಡರುಗಳನ್ನು ಅದೇ ದಿನ ಸಾಯಂಕಾಲ 4-05 ಗಂಟೆಗೆ ಟೆಂಡರುದಾರರ ಸಮಕ್ಷಮ ತೆರೆಯಲಾಗುವುದು.

| ಯೂನಿಟ್ ಸಂಖ್ಯೆ | ಸಾಮಗ್ರಿ ವಿವರ | ಅಂದಾಜು ಪ್ರಮಾಣ (ಕೆ.ಜಿ. ಗಳಲ್ಲಿ) | ಇ.ಎಂ.ಡಿ. ಮೊತ್ತ |
|---|---|---|---|
| 1 | 5 x 8 ಎಲ್ ಡಿ ಪಿ ಇ ಚೀಲಗಳು | 677 | ರೂ. 2000.00 |
| 2 | 8 x 12 ಎಲ್ ಡಿ ಪಿ ಇ ಚೀಲಗಳು | 1072 | ರೂ. 3000.00 |

**ಷರತ್ತುಗಳು**

1. ಪ್ರತಿಯೊಂದು ಯೂನಿಟ್ ಸಾಮಗ್ರಿಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬೇಕಾಗುವುದು.
2. ಪ್ರತಿ ಯೂನಿಟ್‌ಗೆ ನಿಗದಿಪಡಿಸಿರುವ ಠೇವಣಿ ಹಣವನ್ನು ಈ ಕೆಳಗೆ ಸಹಿ ಮಾಡಿರುವವರ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿ.ಡಿ. ಪಡೆದು ಫಾರಂ ನ ಜೊತೆಗೆ ಲಗತ್ತಿಸುವುದು.
3. ಪ್ರತಿಯೊಂದು ಟೆಂಡರ್ ಫಾರಂ ಬೆಲೆ 12.00 ರೂ. ತೆರಿಗೆಗಳು ಸೇರಿ ಇದನ್ನು ಈ ಕಛೇರಿಯಲ್ಲಿ ಪಾವತಿಸಿ ಟೆಂಡರು ಫಾರಂನ್ನು ಪಡೆಯಬಹುದಾಗಿದೆ.
4. ಸರಬರಾಜುದಾರರು ತಮ್ಮ ಉತ್ಪಾದನಾ ಘಟಕದ ಹೆಸರು, ಗುಣಮಟ್ಟ ಇತ್ಯಾದಿಗಳನ್ನು ಪರಿಶೀಲಿಸುವ ಸಲುವಾಗಿ ತಾವು ಉತ್ಪಾದಿಸಿ ಸರಬರಾಜು ಮಾಡುವ ಸರಕಿನ ಸ್ಯಾಂಪಲ್‌ಗಳನ್ನು ಟೆಂಡರ್ ಹಾಕುವ ಮೊದಲು ಈ ಕಛೇರಿಗೆ ಸಲ್ಲಿಸಬೇಕು.

5. ಯಶಸ್ವಿ ಟೆಂಡರುದಾರರು ಈ ಕಛೇರಿಯಿಂದ ಸರಬರಾಜು ಆದೇಶ ಪಡೆಯುವ ಮೊದಲು ತಾವು ಸರಬರಾಜು ಮಾಡುವ ಸರಕಿನ ಒಟ್ಟು ಬೆಲೆಯ ಶೇಕಡಾ 10 ರಷ್ಟು ಭದ್ರತಾ ಠೇವಣಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ಅರಣ್ಯ ವಿಭಾಗ ಇವರ ಹೆಸರಿನ ಮೇಲೆ ತೆಗೆಯಲಾದ ಬ್ಯಾಂಕ್ ಡಿ.ಡಿ.: ಎಫ್.ಡಿ.ಆರ್. ಮೂಲಕ ಸಲ್ಲಿಸಬೇಕು.
6. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಪಡೆಯಬಹುದು.

ಸೀಮಾಗರ್ಗ್

ಪಿ.ಆರ್. 574

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

## ಕಾರ್ಯಪಾಲಕ ಅಭಿಯಂತರವರ ಕಛೇರಿ ವಿ.ನಾ. ವಿಭಾಗ, ಮಂಡ್ಯ

## ಟೆಂಡರ್ ಪ್ರಕಟಣೆ

**ಸಂಖ್ಯೆ: 24 :2003-04, ದಿನಾಂಕ: 20ನೇ ಆಗಸ್ಟ್ 2003 (ಐಟಂವಾರು ಟೆಂಡರು)**

ಈ ಕೆಳಗೆ ಕಾಣಿಸಿದ ಕೆಲಸಕ್ಕೆ ನೋಂದಾಯಿಸಿದ ಗುತ್ತಿಗೆದಾರರಿಂದ ನಿಗದಿತ ನಮೂನೆಯಲ್ಲಿ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು ಕರ್ನಾಟಕ ಸರ್ಕಾರ ರಾಜ್ಯಪಾಲರ ಪರವಾಗಿ ಆಹ್ವಾನಿಸಿರುತ್ತಾರೆ. ಈ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಕಛೇರಿಯಲ್ಲಿ ಈ ಕೆಳಗೆ ಕಾಣಿಸಿದ ದಿನಾಂಕ: 10.10.2003ರ ಸಂಜೆ 4.00 ಗಂಟೆಯೊಳಗೆ ಸ್ವೀಕರಿಸಲಾಗುವುದು. ಈ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಈ ಕೆಳಗೆ ಸಹಿ ಮಾಡಿರುವವರು ದಿನಾಂಕ: 10.10.2003ರ ಸಂಜೆ 5.00 ಗಂಟೆಗೆ ನಮ್ಮ ಕಛೇರಿಯಲ್ಲಿ ತೆರೆಯಲಾಗುವುದು.

ಕೆಲಸದ ಪೂರ್ತಿ ನಕ್ಷೆಗಳಲ್ಲಿ ಮಾಡಬೇಕಾಗಿರುವ ಕೆಲಸದ ವಿಶಿಷ್ಟ ತಾಂತ್ರಿಕ ವಿವರಣೆಯುಳ್ಳ ಎಲ್ಲಾ ಐಟಂಗಳಲ್ಲಿ ಬರುವ ಪ್ರಮಾಣ ಷೆಡ್ಯೂಲ್‌ನ್ನು ಹೊಂದಿರುವ ಕೆಲಸಕ್ಕೆ ಬೇಕಾದ ಸಾಮಗ್ರಿಗಳನ್ನು ಸೂಚಿಸಿರುವ ಕ್ವಾರಿ ಚಾರ್ಟ್‌ಗಳು (ಎಲ್ಲಿ ಅವಶ್ಯಕತೆಯೋ ಅಲ್ಲಿ) ಮತ್ತು ಗುತ್ತಿಗೆ ನಿಯಮಗಳನ್ನು ಒಳಗೊಂಡಿರುವ ಕರಾರಿನ ಷರತ್ತುಗಳನ್ನು ಹೊಂದಿರುವ ಕೆಲಸ ಪ್ರಿಂಟ್ ಮಾಡಿರುವ ಟೆಂಡರ್ ಡಾಕ್ಯುಮೆಂಟ್‌ಗಳನ್ನು ಟೆಂಡರ್ ಹಾಕುವ ರಿಜಿಸ್ಟರ್ಡ್ ಗುತ್ತಿಗೆದಾರರು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕದಲ್ಲಿ ನಿಗದಿತ ಟೆಂಡರ್ ಫಾರಂ ಬೆಲೆಯನ್ನು ಅರ್ಜಿ ಹಾಕುವ ಸಮಯದಲ್ಲಿಯೇ ಈ ಕಛೇರಿಗೆ ಸಲ್ಲಿಸತಕ್ಕದ್ದು. ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರ ಅವಲೋಕನೆಗೆ ಟೆಂಡರ್ ಹಾಕುವ ಗುತ್ತಿಗೆದಾರರು ಹಾಲಿ ಮಾಡುತ್ತಿರುವ ಕೆಲಸಗಳ ಪಟ್ಟಿಯನ್ನು ಟೆಂಡರ್‌ನ ಜೊತೆಗೆ ನೀಡಬೇಕು.

ಟೆಂಡರ್‌ನ್ನು ಹಾಕಲು ಇಚ್ಛಿಸುವ ಗುತ್ತಿಗೆದಾರರು ಟೆಂಡರ್ ಡಾಕ್ಯುಮೆಂಟಿನ ಒಂದು ಭಾಗವಾಗಿರುವ ಟೆಂಡರ್ ನೋಟೀಸ್ ಫಾರಂ ಭಾಗ-1 ಪಿಡಬ್ಲ್ಯೂಡಿ-66 ರಲ್ಲಿ ನೀಡಬೇಕಾಗಿರುವ ಮುಂಗಡ ಆದೇಶಗಳು ಮತ್ತು ನಿಯಮಗಳಿಗೆ ಬದ್ಧರಾಗಿರಬೇಕು. ಟೆಂಡರ್ ನೋಟೀಸ್ ಭಾಗ ಒಂದು ಪಿಡಬ್ಲ್ಯೂಜಿ-65 ರಲ್ಲಿ ಈ ಕೆಳಕಂಡ ವಿವರಗಳು ಇರುತ್ತವೆ. ನೀಡಬೇಕಾಗಿರುವ ಮುಂಗಡ ಠೇವಣಿ ಹಣ ಅದನ್ನು ಕಟ್ಟುವ ವಿಧಾನ, ಅವಧಿ, ಗುತ್ತಿಗೆದಾರರು ಟೆಂಡರ್‌ಗಳನ್ನು ಸಲ್ಲಿಸುವ ವಿಧಾನ ಮತ್ತು ಟೆಂಡರ್ ಡಾಕ್ಯುಮೆಂಟ್‌ಗಳನ್ನು ಪೂರ್ತಿ ಮಾಡುವ ರೀತಿ ಮತ್ತು ಟೆಂಡರ್ ವ್ಯಾಲಿಡಿಟಿ ಅವಧಿ ಟೆಂಡರ್‌ಗಳನ್ನು ತೆರೆಯುವುದು, ಟೆಂಡರ್‌ನಲ್ಲಿ ನೀಡಬೇಕಾಗಿರುವ ಭದ್ರತಾ ಠೇವಣಿ ಬೆಲೆಗಳ ಹೊಂದಾಣಿಕೆ ಇತ್ಯಾದಿ ಇವಲ್ಲದೇ ಮತ್ತೇನಾದರೂ ವಿವರಗಳು ಬೇಕಾದಲ್ಲಿ ಕಛೇರಿಯ ಎಲ್ಲಾ ಕೆಲಸದ ದಿನಗಳಲ್ಲಿ ಕಛೇರಿಯ ವೇಳೆಯಲ್ಲಿ ಪಡೆಯಬಹುದು.

ಈ ಕೆಳಗೆ ನಮೂದಿಸಿರುವ ದಿನಾಂಕಗಳಲ್ಲಿ ಏನಾದರೂ ಸಾರ್ವಜನಿಕ ರಜವಾದರೆ ಮಾರನೇ ಕಛೇರಿಯ ದಿನ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.

**ಟೆಂಡರ್ ಕೆಲಸದ ಬಗ್ಗೆ ವಿವರಗಳು**

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್ ಇಟ್ಟಿರುವ ಹಣ ರೂ. | ಇ.ಎಂ.ಡಿ ರೂ. ಗಳಲ್ಲಿ | ಟೆಂಡರ್ ಫಾರಂ 1 ಸೆಟ್‌ಗೆ ಬೆಲೆ ದ್ವಿ ಪ್ರತಿಯಲ್ಲಿ | ಗುತ್ತಿಗೆ ದಾರರ ದರ್ಜೆ | ಕೆಲಸವನ್ನು ಮುಗಿಸಲು ನಿಗದಿ ಪಡಿಸಿದ ಅವಧಿ (ಮಳೆಗಾಲ ಸೇರಿ) | ಅರ್ಜಿಗಳನ್ನು ಟೆಂಡರ್ ಫಾರಂ ಬೆಲೆ ಸಮೇತ ಸ್ವೀಕರಿಸುವ ತಾ: ಸಂಜೆ: 5-30 ರವರೆಗೆ | ಖಾಲಿ ಟೆಂಡರ್ ಫಾರಂ ಗಳನ್ನು ನೀಡುವುದು ತಾ: ಸಂಜೆ: 5-30 ರವರೆಗೆ | ಭರ್ತಿ ಮಾಡಿದ ಟೆಂಡರ್ ಗಳನ್ನು ಸ್ವೀಕರಿಸುವ ತಾ: ಸಂಜೆ: 4-00 ಗಂಟೆಗೆ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಮದ್ದೂರು ಕೆರೆಯಡಿಯಲ್ಲಿ ಬರುವ ಚಾಮನಹಳ್ಳಿ ನಾಲೆಯ 5ನೇ ಕಿ.ಮೀ. ನಲ್ಲಿ ಸೋಪಾನ, ಕ್ಯಾಟಲ್‌ರ್‍ಯಾಂಪ್ ನಿರ್ಮಾಣ ಮತ್ತು ಯು.ಸಿ.ಆರ್. ಲೈನಿಂಗ್ ಮಾಡುವ ಕಾಮಗಾರಿ | 8,16,860 | 16,350 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 4 ತಿಂಗಳು | 26.9.03 | 8.10.03 | 10.10.03 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 2 | ಮದ್ದೂರು ಕೆರೆಯಡಿಯಲ್ಲಿ ಬರುವ ಚಾಮನಹಳ್ಳಿ ನಾಲೆಯ 6ನೇ ಕಿ.ಮೀ. ನಲ್ಲಿ ಸೋಪಾನ, ಕ್ಯಾಟಲ್‌ರ್ಯಾಂಪ್ ನಿರ್ಮಾಣ ಮತ್ತು ಯು.ಸಿ.ಆರ್. ಲೈನಿಂಗ್ ಮಾಡುವ ಕಾಮಗಾರಿ | 8,16,475 | 16,350 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 4 ತಿಂಗಳು | 26.9.03 | 8.10.03 | 10.10.03 |
| 3 | ಮದ್ದೂರು ಕೆರೆಯಡಿಯಲ್ಲಿ ಬರುವ ಚಾಮನಹಳ್ಳಿ ನಾಲೆಯ 3ನೇ ಕಿ.ಮೀ. ನಲ್ಲಿ ಪೈಪ್‌ಔಟ್‌ಲೆಟ್ ಪುನರ್ ನಿರ್ಮಾಣ ಮತ್ತು ಯು.ಸಿ.ಆರ್. ಲೈನಿಂಗ್ ಮಾಡುವ ಕಾಮಗಾರಿ | 5,36,536 | 10,750 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 4 ತಿಂಗಳು | 26.9.03 | 8.10.03 | 10.10.03 |
| 4 | ಮದ್ದೂರು ಕೆರೆಯಡಿಯಲ್ಲಿ ಬರುವ ಚಾಮನಹಳ್ಳಿ ನಾಲೆಯ 4ನೇ ಕಿ.ಮೀ. ನಲ್ಲಿ ಪೈಪ್‌ಔಟ್‌ಲೆಟ್ ಪುನರ್ ನಿರ್ಮಾಣ ಮತ್ತು ಯು.ಸಿ.ಆರ್. ಲೈನಿಂಗ್ ಮಾಡುವ ಕಾಮಗಾರಿ | 8,11,469 | 16,300 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 4 ತಿಂಗಳು | 26.9.03 | 8.10.03 | 10.10.03 |
| 5 | ಹೊಸ ಮದ್ದೂರು ಶಾಖೆಯ ಸರಪಳಿ 39450 ಕಿ.ಮೀ. ನಲ್ಲಿರುವ ಡ್ರಾಪ್ ಕೆಳಭಾಗದಲ್ಲಿ ಕೊರೆದಿರುವ ಭಾಗದಲ್ಲಿ ಲೈನಿಂಗ್ ಮತ್ತು ಅಭಿವೃದ್ಧಿ ಮಾಡುವ ಕಾಮಗಾರಿ. | 12,24,916 | 18,400 | 800 + ತೆರಿಗೆ ಪ್ರತ್ಯೇಕ | 2ನೇ ದರ್ಜೆ ಮತ್ತು ಮೇಲ್ಪಟ್ಟು | 4 ತಿಂಗಳು | 26.9.03 | 8.10.03 | 10.10.03 |

**ಸೂಚನೆಗಳು**

1. ಯಾವುದೇ ಕಾರಣವನ್ನೂ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ನಿರಾಕರಿಸುವ ಹಕ್ಕನ್ನು ಸಮರ್ಥ ಅಧಿಕಾರಿಯು ಕಾದಿರಿಸಿಕೊಂಡಿರುತ್ತಾರೆ.
2. ಮುಂಗಡ ಠೇವಣಿ ಹಣವನ್ನು ಕಾರ್ಯಪಾಲಕ ಅಭಿಯಂತರರು ವಿ.ನಾ. ವಿಭಾಗ, ಮಂಡ್ಯ ಇವರ ಹೆಸರಿನಲ್ಲಿ ನಿಗದಿತ ಠೇವಣಿ ಮಾಡಿರುವ ರಶೀತಿಯನ್ನು ಅಥವಾ ಡಿ.ಡಿ. ಯ ಮೂಲಕ ಅಥವಾ ಎನ್.ಎಸ್.ಸಿ. ಮೂಲಕ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಟೆಂಡರ್‌ನೊಡನೆ ಸಲ್ಲಿಸತಕ್ಕದ್ದು ಹಾಗೂ ಮುಂಗಡ ಠೇವಣಿ ಭದ್ರತೆಯ ವ್ಯಾಲಿಡಿಟಿ ಪೀರಿಯಡ್ 90 ದಿವಸಗಳ ಅವಧಿಯಲ್ಲಿ ಒಳಗೊಂಡಿರತಕ್ಕದ್ದು.
3. ಗುತ್ತಿಗೆದಾರರು ಟೆಂಡರ್ ಫಾರಂಗಳಾಗಲಿ ಅರ್ಜಿ ಸಲ್ಲಿಸುವಾಗ ರಿಜಿಸ್ಟ್ರೇಷನ್ ನಕಲನ್ನು ಮತ್ತು ಟೆಂಡರ್‌ಫಾರಂ ಹಣವನ್ನು ನೀಡಬೇಕು ಮತ್ತು ಟೆಂಡರ್ ಫಾರಂಗಳಿಗೆ ಕಟ್ಟಿದ ಹಣವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ.
4. ಕಾಮಗಾರಿಗೆ ಬೇಕಾದ ಸೀಮೆಂಟ್ ಮತ್ತು ಉಕ್ಕನ್ನು ಗುತ್ತಿಗೆದಾರರೇ ಅನುಮೋದಿತ ಗುಣಮಟ್ಟದ ವಸ್ತುಗಳನ್ನು ಖರೀದಿಸಿ ಉಪಯೋಗಿಸಬೇಕು.
5. ಷರತ್ತಿನ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಕಾರ್ಯಪಾಲಕ ಅಭಿಯಂತರರು,

ಪಿ.ಆರ್. 575 ವಿ.ನಾ. ವಿಭಾಗ, ಮಂಡ್ಯ.

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, ಪಾರ್ಕ್ ಹೌಸ್, ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇಪ(1) 534/2003-04/ಪಿಎಸ್‌ಸಿ, ದಿನಾಂಕ: 28ನೇ ಆಗಸ್ಟ್ 2003**

ದಿನಾಂಕ: 3.10.2002ರ ಕರ್ನಾಟಕ ರಾಜ್ಯ ಪತ್ರದ ಭಾಗ-5 ರಲ್ಲಿ ಪ್ರಕಟಿಸಲಾಗಿದ್ದ 2001ನೇ ಸಾಲಿನ ಮೊದಲನೇ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ ಚಿತ್ರದುರ್ಗ ಕೇಂದ್ರದ Appendix-A ರಡಿಯಲ್ಲಿ ಜನರಲ್ ಲಾ ಭಾಗ-1ಕ್ಕೆ ಸಂಬಂಧಿಸಿದಂತೆ, 'ಸಾಮಾನ್ಯ ದರ್ಜೆ' ಯಲ್ಲಿ ಉತ್ತೀರ್ಣರಾದ ನೋಂದಣಿ ಸಂಖ್ಯೆಗಳು: 36232 ಮತ್ತು 36235ರ ನಡುವೆ ನೋಂದಣಿ ಸಂಖ್ಯೆ 36233 ಅನ್ನು ಸೇರಿಸಿ ಓದಿಕೊಳ್ಳುವುದು.

**ಬಿ.ಎ. ಹರೀಶ್‌ಗೌಡ**

ಪಿ.ಆರ್. 576

ಕಾರ್ಯದರ್ಶಿ ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**PUBLIC WORKS DEPARTMENT**
**(National Highways)**
**Office of the Executive Engineer, National Highways Division, No. 14/3, 4th Floor, C.F.C. Building, Nrupathunga Road, Bangalore**
**Invitation for Bids (IFB)**
**(Two-Cover Bid System)**
**TENDER NOTIFICATION No. 08/2003-04, dated: 20th August 2003**

Sealed item rate tenders for the works noted below under TWO COVER BID SYSTEM as per Karnataka Transparency in Public procurement ordinance-2000 and Act-2000 in the prescribed form in duplicate is invited from the Class-I contractors registered in K.P.W.D. Two covers bid system of tendering **(Consisting of Technical Bid - Cover No. 1 and Financial Bid - Cover No. 2)** shall be followed. Financial Bid of only those bidders who qualify in the Technical Bid shall be opened. Bids will be received in two parts in two different sealed covers marked as 'Technical Bid' and 'Financial Bid'. These two covers shall be sealed and kept in another sealed cover and duly super scribing the name of work and shall be addressed to the undersigned with name and full postal address of the bidder. Completed Tenders will be received in the office of the Superintending Engineer, N.H. Circle, Bangalore and Executive Engineer, N.H. Division, Bangalore and the tenders will be opened by the undersigned on the dates noted below. If any one of the dates noted below happens to be a general holiday, the next working day will hold good.

| Sl. No. | Name of work | Approximate Amount put to tender. Rs. in lakhs | Bid Security (E.M.D.) Rs. in lakhs | Cost of Tender Forms (In Rs) Non refundable | Nature of work | Time for completion of work including Monsoon | Class of Register contractors eligible for tender | No. of calls |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | Constn. of four lane carriage way from km 317.90 to 319.68 & 322.20 to 324.250 of NH-4 MKB sec. | Rs. 814.50 | Rs. 16.30 | Rs. 90000/- + 8% ST and 10% SC on ST | GSB WMM, BM & DBM, BC & Concrete work | 18 Months excluding Monsoon | Class I | Ist call |

**Conditions:**

1. The contractor should own the following machinery-

| Sl. No. | Machinery | Maximum age as on 1.8.2003 | Numbers | Evidence of ownership to be furnished |
|---|---|---|---|---|
| 1 | HMP with electronic controls minimum 80/100 TPH capacity | 5 years | 1 | Purchase invoice/Purchase Bill Owned |
| 2 | Sensor paver finisher | 5 years | 1 | Purchase invoice/Purchase Bill |
| 3 | Pugmill | 5 years | 1 | Purchase invoice/Purchase Bill/ Sale deed with a copy of purchase invoice from the seller |
| 4 | Motor Grader | 5 years | 2 Nos | Purchase invoice/Purchase Bill/ Sale deed with a copy of purchase invoice from the seller |

| Sl. No. | Machinery | Maximum age as on 1.8.2003 | Numbers | Evidence of ownership to be furnished |
|---|---|---|---|---|
| 5 | Dozer | 5 years | 1 No | -do- |
| 6 | Front end loader | 5 years | 1 No | -do- |
| 7 | Water tanker | 5 years | 2 No | -do- |
| 8 | Tandem roller | 5 years | 1 No | -do- |
| 9 | Vibratory Road Roller | 5 years | 1 No | -do- |
| 10 | Mechanical Bitumen Sprayer | 5-7 years | 1 No | Purchase details |
| 11 | D.R. Roller | 5 years | 2 Nos | -do- |
| 12 | Concrete Mixers with integral weigh batching facility | 5 years | 1 No | -do- |
| 13 | Needle Vibrators | 5 years | 2 Nos | -do- |
| 14 | Tippers | 5 years | 5 Nos | Registration Certificate from RTO |
| 15 | Other Allied Machineries | - | - | - |

It should be made clear by the intending contractors that the above machineries will be made available at site of work for the above project till completion of work.

2. The contractors interested in bidding for the work may submit an application to the undersigned along with cost of tender documents to be paid in cash or in the form of DD drawn in favour of Executive Engineer, National Highways division, Bangalore, payable at Bangalore. Along with the application, the applicant should submit proof of Registration, Latest Income - Tax clearance certificate and Sale tax clearance certificate obtained from the concerned department while submitting the application for tender schedules, otherwise the application cannot be considered. Bidding documents will not be sent by post.
3. Work experience certificate for the work should be obtained from the competent authority not below the rank of Executive Engineer, for having successfully completed for having completed a single work of similar nature of value not less than 50% of the amount put to tender, in any one financial year during a block period of previous five financial years.

4A) **Financial Status & Capacity:** A letter of Line of Credit in the prescribed format from the Nationalized Bank or Scheduled Bank for financing the said work for an amount of 10% of amount put to tender shall be enclosed in the Technical Bid. Non-Production of this certificate will cause to disqualify the tender.

(B) Bid Security (EMD) must accompany Bids in this specified from in the Technical - Bid is to be valid for 45 days beyond the validity of Bid (i.e. 120 days + 45 days)

5. The Bid Security (EMD) in the form of DD/FDR/Pay Order/ Bank Guarantee drawn from a Nationalized or Scheduled Bank or NSC (Pledged in favour of the undersigned) shall be enclosed in the Technical Bid. The Bank Guarantee from any Nationalized or Scheduled Bank in the format given in Volume-III, supplied with the tender form. Otherwise tenders will be rejected. Regarding the validity of Bid Security (EMD), tender condition etc., PWG-66 and SBD shall be referred and is binding on the tenderer.
6. **The Schedule of dates**

| | | |
|---|---|---|
| i | Last Date for Receipt of Application in the Office of the Executive Engineer, National Highway Division Bangalore up to 5.00 P.M. | 20-10-2003 |
| ii | Date for issue of Blank Tender Forms 10.00 A.M. up to 4.00 P.M. | 23 & 25-10-2003 |
| iii | Pre-Bid meeting will be held in the office of the Superintending Engineer N.H. Circle at 11.30 A.M. | 3-11-2003 |
| iv | Receipt of Sealed Tenders up to 4.00 P.M. | 24-11-2003 |
| v | Opening of Technical Bid at 4.30 P.M. if possible on | 24-11-2003 |

7. All the documents enclosed in support of Technical Bid shall be attested by an official not below the rank of District level officer. The Original documents should be produced for verification on the day of opening of Technical Bid or otherwise tenders will be disqualified.
8. Financial Bids of technically qualified tenders will be opened in the office of the Executive Engineer, National Highway Division and Bangalore. The date and time will be intimated.
9. Only relevant certificates and details shall be furnished in the technical bid conditional tenders will not be accepted.

10. The competent authority reserves the right to reject any or all applications without assigning any reason.
11. Tendering by joint ventures is not allowed. Any other details regarding the work and other information can be obtained from the above office during office hours.
12. Pre-Bid meeting will be held at the office of the Superintending Engineer, National Highway Circle and Bangalore to clarify the issues and to answer questions on any matter that may be raised at that stage.
13. the Intending Bidders are bound by the conditions stipulated in the Standard Bidding Documents published by Indian Road Congress and the Bidders shall follow the Instructions in Section-I before submitting their Bids.

Executive Engineer,
PR-577 N.H. Division, Bangalore.

**PUBLIC WORKS DEPARTMENT**
**(National Highway)**
**Office of the Executive Engineer, National Highways Division, No. 14/3, 4th Floor, C.F.C. Building, Nrupathunga Road, Bangalore 560001**
**TENDER NOTIFICATION**
**(Two-Cover Bid System)**
**No. EE/NHDB/AE1/NIT/10/2003-04/2799, dated: 21st August 2003**

Sealed Item Rate Tenders for the works noted below under TWO COVER BID SYSTEM as per Karnataka Transparency in Public Procurement Act 2000 in prescribed form in duplicate is invited from the Class-I contractors registered in KPWD/MORT&H approved Firms / agency. Two covers bid system of tendering consists of Technical Bid Financial Bid. These two covers shall be sealed and kept in another sealed cover duly superscribing name of work and shall be addressed to the undersigned with name and full postal addresses of the bidder. Completed bids will be received in the Office of the Superintending Engineer, National Highway Circle, Bangalore or in the Office of the Executive Engineer, National Highway Division, Bangalore up to 4.00 P.M. on 20-9-2003, subject to the conditions laid down in form PWG.65, 66 of KPWD code Vol II, Special Conditions contained in the schedules and in Karnataka Transparency in Public Procurement Act, 2000. The Technical Bids will be opened by the undersigned on the dates noted below. Financial bids of only those bidders who qualify in the Technical Bid shall be opened. If any one of the dates mentioned below happens to be General Holiday, the next convenient day will be intimated.

| Sl. No. | Name of Work | Amount put to Tender Rs. in Lakhs | EMD in Rs | Cost of Tender Forms (in Rs) Non refundable including taxes | Nature of work | Time for completion of work (Excluding monsoon) |
|---|---|---|---|---|---|---|
| 1 | Improvements to Riding Quality from Km 255.00 to 267 of NH 4, MKB Section | Rs. 245.00 | 2,45,000/- | Rs. 25000/- + 8% ST + 10% SC on ST | BM & SDBC | Four Months |

**GENERAL CONDITIONS:**

1. The contractors interested in bidding for the work may submit an application to the undersigned along with cost of tender documents (non refundable) to be paid in cash or in the form of DD drawn in favour of Executive Engineer, National Highway Division, Bangalore Payable at Bangalore along with application. The applicants should submit proof of registration, Latest income tax clearance certificate and Karnataka sales tax clearance certificate obtained from the concerned Departments, relevant experience certificate issued by the officer not below the rank of Executive Engineer while submitting the applications for tender schedules, otherwise the application will not be considered.
2. The Schedule of dates is as under:

| | | |
|---|---|---|
| a | Last date for receipt of application | 15.9.2003 |
| b | Issue of Blank tender schedules up to 5.30 PM | 18.9.2003 |
| c | Last date for submission of Tenders up to 4.00 PM | 20.9.2003 |
| d | Opening of Technical Bid @ 4.30 PM | 20.9.2003 |

**CONDITIONS FOR TECHNICAL BIDS:**

1. The EMD in the form of DD/FDR/Pay Order/Bank Guarantee drawn from a Nationalized or Scheduled Bank or NSC (Pledged in favour of the undersigned) shall be enclosed in the Technical Bid. The Bank Guarantee shall be in the form as specified in PWG-66 supplied with

the tender form. Otherwise tenders will be rejected. All types of EMD should be valid for 180 days from the date of opening fixed for tender other wise such tenders will be rejected.

2. The defect liability period for the work in this notification will be three years reckoned from the date of completion of the work. The item of works to be executed being of very high standards shall not require any repairs for three years after completion of the same. If the stretch/structure notified above require any repair during defect liability period as above, the contractor/firm shall re-do the same at contractor's/firm own cost. The EMD/SD tools shall be accordingly produced.
3. Each tenderer shall own following machinery and enclose with the Technical Bid evidence of ownership, as detailed under. The technical bids submitted without evidence of ownership as detailed are liable for disqualification.
4. The at the time of submission of application the intending tenderer shall submit an undertaking of erecting the HMP within the radius of 40 Kms from the work spot on award of the said work.

| Sl. No. | Machinery | Numbers | Evidence of Ownership to be furnished |
|---|---|---|---|
| | **For Road work** | | |
| 1 | Hot Mix Plant of 40/60 TPH or Higher capacity (as per MORT&H Specification) | One | Copy of Purchase invoice/Sale deed with a copy of purchase invoice from the seller |
| 2 | Sensor Paver Finisher | One | -Do- |
| 3 | Static road roller | Two | -Do- |
| 4 | Vibratory Road Roller | One | -Do- |
| 5 | Mechanical Sprayer | One | -Do- |
| 6 | Tipper | Six | Copy of Registration certificate from RTO |

5. Each Tender should have individually satisfactorily completed works of similar nature of value not less than 30% of the value of work in this notification (Updated at 10% per annuam compoundable) in any one financial year during a block period of previous five years. Alternatively, the contractor should have completed a billing of 30% of the value of work in this notification, during the current financial year for same nature of work. The experience certificate in this regard should invariably have mention of nature/items of work executed, along with date of commencement and date of completion; otherwise the technical bid is liable for disqualification.
6. For proof of Financial Capacity Line of Credit from any Scheduled Bank shall be invariably produced for the particular work in the proforma prescribed in the technical Bid for an amount equal to 30% of the amount put to tender. Failure to submit the Line of Credit along with technical Bid lead to disqualification.
7. All documents enclosed in support of technical bids, shall be attested by a Gazetted officer not below the rank of District Level Officer, otherwise the bids are liable for disqualification. The original documents should be produced for verification at any stage of tender process as and when sought for. Failure to produce original documents leads to disqualification of technical bid. Only relevant certificates and details shall be furnished with the technical bid. Details of Company/ Agencies/ Firms profile are to be enclosed.
8. Tendering by Joint Venture is not allowed.
9. The Competent authority reserves the right to reject any or all the tenders without Assigning any reasons.
10. Conditional tenders will not be accepted.

Any other details regarding the work can be obtained from the above office during office hours.

Executive Engineer,
N.H. Division, Bangalore.

PR-578

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ವಿಶ್ವೇಶ್ವರಯ್ಯ ನಾಲಾ ವಿಭಾಗ, ಮಂಡ್ಯ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: 25 :2003-04, ದಿನಾಂಕ: 22ನೇ ಆಗಸ್ಟ್ 2003 (ಐಟಂವಾರು ಟೆಂಡರು)**

ಈ ಕೆಳಗೆ ಕಾಣಿಸಿದ ಕೆಲಸಕ್ಕೆ ನೋಂದಾಯಿಸಿದ ಗುತ್ತಿಗೆದಾರರಿಂದ ನಿಗದಿತ ನಮೂನೆಯಲ್ಲಿ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು ಕರ್ನಾಟಕ ಸರ್ಕಾರ ರಾಜ್ಯಪಾಲರ ಪರವಾಗಿ ಆಹ್ವಾನಿಸಿರುತ್ತಾರೆ. ಈ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಕಛೇರಿಯಲ್ಲಿ ಈ ಕೆಳಗೆ ಕಾಣಿಸಿದ ದಿನಾಂಕ: 3.10.2003ರ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಈ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಈ ಕೆಳಗೆ ಸಹಿ ಮಾಡಿರುವವರು ದಿನಾಂಕ: 3.10.2003ರ ಸಂಜೆ 5.00 ಗಂಟೆಗೆ ನಮ್ಮ ಕಛೇರಿಯಲ್ಲಿ ತೆರೆಯಲಾಗುವುದು.

ಕೆಲಸದ ಪೂರ್ತಿ ನಕ್ಷೆಗಳಲ್ಲಿ ಮಾಡಬೇಕಾಗಿರುವ ಕೆಲಸದ ವಿಶಿಷ್ಟ ತಾಂತ್ರಿಕ ವಿವರಣೆಯುಳ್ಳ ಎಲ್ಲಾ ಐಟಂಗಳಲ್ಲಿ ಬರುವ ಪ್ರಮಾಣ ಷೆಡ್ಯೂಲ್‌ನ್ನು ಹೊಂದಿರುವ ಕೆಲಸಕ್ಕೆ ಬೇಕಾದ ಸಾಮಗ್ರಿಗಳನ್ನು ಸೂಚಿಸಿರುವ ಕ್ವಾರಿ ಚಾರ್ಟ್‌ಗಳು (ಎಲ್ಲಿ ಅವಶ್ಯಕತೆಯೋ ಅಲ್ಲಿ)

ಮತ್ತು ಗುತ್ತಿಗೆ ನಿಯಮಗಳನ್ನು ಒಳಗೊಂಡಿರುವ ಕರಾರಿನ ಷರತ್ತುಗಳನ್ನು ಹೊಂದಿರುವ ಕೆಲಸ ಪ್ರಿಂಟ್ ಮಾಡಿರುವ ಟೆಂಡರ್ ಡಾಕ್ಯುಮೆಂಟ್‌ಗಳನ್ನು ಟೆಂಡರ್ ಹಾಕಲು ಇಚ್ಛಿಸುವ ರಿಜಿಸ್ಟರ್ಡ್ ಗುತ್ತಿಗೆದಾರರು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕದಲ್ಲಿ ನಿಗದಿತ ಟೆಂಡರ್ ಫಾರಂ ಬೆಲೆಯನ್ನು ಅರ್ಜಿ ಹಾಕುವ ಸಮಯದಲ್ಲಿಯೇ ಈ ಕಛೇರಿಗೆ ಸಲ್ಲಿಸತಕ್ಕದ್ದು. ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರ ಅವಲೋಕನೆಗೆ ಟೆಂಡರ್ ಹಾಕುವ ಗುತ್ತಿಗೆದಾರರು ಹಾಲಿ ಮಾಡುತ್ತಿರುವ ಕೆಲಸಗಳ ಪಟ್ಟಿಯನ್ನು ಟೆಂಡರ್‌ನ ಜೊತೆಗೆ ನೀಡಬೇಕು.

ಟೆಂಡರ್‌ನ್ನು ಹಾಕಲು ಇಚ್ಛಿಸುವ ಗುತ್ತಿಗೆದಾರರು ಟೆಂಡರ್ ಡಾಕ್ಯುಮೆಂಟಿನ ಒಂದು ಭಾಗವಾಗಿರುವ ಟೆಂಡರ್ ನೋಟೀಸ್ ಫಾರಂ ಭಾಗ-1 ಪಿಡಬ್ಲ್ಯೂಡಿ-66 ರಲ್ಲಿ ನೀಡಬೇಕಾಗಿರುವ ಆದೇಶಗಳು ಮತ್ತು ನಿಯಮಗಳಿಗೆ ಬದ್ಧರಾಗಿರಬೇಕು. ಟೆಂಡರ್ ನೋಟೀಸ್ ಭಾಗ ಒಂದು ಪಿಡಬ್ಲ್ಯೂಜಿ-66 ರಲ್ಲಿ ಈ ಕೆಳಕಂಡ ವಿವರಗಳು ಇರುತ್ತವೆ. ನೀಡಬೇಕಾಗಿರುವ ಮುಂಗಡ ಠೇವಣಿ ಹಣ ಅದನ್ನು ಕಟ್ಟುವ ವಿಧಾನ, ಅವಧಿ ಗುತ್ತಿಗೆದಾರರು ಟೆಂಡರ್‌ಗಳನ್ನು ಸಲ್ಲಿಸುವ ವಿಧಾನ ಮತ್ತು ಟೆಂಡರ್ ಡಾಕ್ಯುಮೆಂಟ್‌ಗಳನ್ನು ಪೂರ್ತಿ ಮಾಡುವ ರೀತಿ ಮತ್ತು ಟೆಂಡರ್ ವ್ಯಾಲಿಡಿಟಿ ಅವಧಿ ಟೆಂಡರ್‌ಗಳನ್ನು ತೆರೆಯುವುದು, ಟೆಂಡರ್‌ನಲ್ಲಿ ಮಾಡಿದ ತಪ್ಪುಗಳನ್ನು ಸರಿಪಡಿಸುವ ವಿಧಾನ ಕೆಲವು ಸಮಯದಲ್ಲಿ ಟೆಂಡರ್‌ಗಳನ್ನು ಹೋಲಿಸುವ ವಿಧಾನ, ಗುತ್ತಿಗೆದಾರರಿಂದ ಮಾಡಲಾದ ತಪ್ಪುಗಳಿಗೆ ಶಿಕ್ಷಾಕ್ರಮ, ಅನುಮೋದಿತ ಟೆಂಡರ್‌ದಾರರು ನೀಡಬೇಕಾಗಿರುವ ಭದ್ರತಾ ಠೇವಣಿ, ಬೆಲೆಗಳ ಹೊಂದಾಣಿಕೆ ಇತ್ಯಾದಿ ಇವಲ್ಲದೇ ಮತ್ತೇನಾದರೂ ವಿವರಗಳು ಬೇಕಾದಲ್ಲಿ ಕಛೇರಿ ಎಲ್ಲಾ ಕೆಲಸದ ದಿನಗಳಲ್ಲಿ ಕಛೇರಿಯ ವೇಳೆಯಲ್ಲಿ ಪಡೆಯಬಹುದು.

ಈ ಕೆಳಗೆ ನಮೂದಿಸಿರುವ ದಿನಾಂಕಗಳಲ್ಲಿ ಏನಾದರೂ ಸಾರ್ವಜನಿಕ ರಜವಾದರೆ ಮಾರನೇ ಕಛೇರಿಯ ದಿನ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.

**ಟೆಂಡರ್ ಕೆಲಸದ ಬಗ್ಗೆ ವಿವರಗಳು**

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್ ಇಟ್ಟಿರುವ ಹಣ ರೂ. | ಇ.ಎಂ.ಡಿ ರೂ. ಗಳಲ್ಲಿ | ಟೆಂಡರ್ ಫಾರಂ 1 ಸೆಟ್‌ಗೆ ಬೆಲೆ ದ್ವಿ ಪ್ರತಿಯಲ್ಲಿ | ಗುತ್ತಿಗೆ ದಾರರ ದರ್ಜೆ | ಕೆಲಸವನ್ನು ಮುಗಿಸಲು ನಿಗದಿ ಪಡಿಸಿದ ಅವಧಿ (ಮಳೆಗಾಲ ಸೇರಿ) | ಅರ್ಜಿಗಳನ್ನು ಟೆಂಡರ್ ಫಾರಂ ಬೆಲೆ ಸಮೇತ ಸ್ವೀಕರಿಸುವ ತಾ: ಸಂಜೆ: 5-30 ರವರೆಗೆ | ಖಾಲಿ ಟೆಂಡರ್ ಫಾರಂ ಗಳನ್ನು ನೀಡುವುದು ತಾ: ಸಂಜೆ: 5-30 ರವರೆಗೆ | ಭರ್ತಿ ಮಾಡಿದ ಟೆಂಡರ್ ಗಳನ್ನು ಸ್ವೀಕರಿಸುವ ತಾ: ಸಂಜೆ: 4-00 ವರೆಗೆ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಕಾವೇರಿ ಶಾಖೆ 12ನೇ ವಿತರಣಾ ನಾಲಾ ಅಡಿಯಲ್ಲಿ ಬರುವ ಕೊತ್ತತ್ತಿ ಪಿಕಪ್ ನಾಲೆಯನ್ನು ಅಭಿವೃದ್ಧಿ ಪಡಿಸುವ ಕಾಮಗಾರಿ | 9,05,629 | 18,150 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು | 23.9.03 | 29.9.03 | 3.10.03 |
| 2 | ಕಾವೇರಿ ಶಾಖೆ 12ನೇ ವಿತರಣಾ ನಾಲಾ ಅಡಿಯಲ್ಲಿ ಬರುವ ಹನಿಯಂಬಾಡಿ ಪಿಕಪ್ ನಾಲೆಯನ್ನು ಅಭಿವೃದ್ಧಿ ಪಡಿಸುವ ಕಾಮಗಾರಿ | 9,43,604 | 18,900 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು | 23.9.03 | 29.9.03 | 3.10.03 |
| 3 | ಕಾವೇರಿ ಶಾಖೆಯಡಿಯಲ್ಲಿ ಬರುವ ಮೊತ್ತಹಳ್ಳಿ ಪಿಕಪ್ ಅಭಿವೃದ್ಧಿಪಡಿಸುವ ಕಾಮಗಾರಿ | 9,26,831 | 18,550 | 800 + ತೆರಿಗೆ ಪ್ರತ್ಯೇಕ | 3ನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು | 23.9.03 | 29.9.03 | 3.10.03 |

**ಸೂಚನೆಗಳು**

1. ಯಾವುದೇ ಕಾರಣವನ್ನೂ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ನಿರಾಕರಿಸುವ ಹಕ್ಕನ್ನು ಸಮರ್ಥ ಅಧಿಕಾರಿಯು ಕಾದಿರಿಸಿಕೊಂಡಿರುತ್ತಾರೆ.
2. ಮುಂಗಡ ಠೇವಣಿ ಹಣವನ್ನು ಕಾರ್ಯಪಾಲಕ ಅಭಿಯಂತರರು ವಿ.ನಾ. ವಿಭಾಗ, ಮಂಡ್ಯ ಇವರ ಹೆಸರಿನಲ್ಲಿ ನಿಗದಿತ ಠೇವಣಿ ಮಾಡಿರುವ ರಶೀತಿಯನ್ನು ಅಥವಾ ಡಿ.ಡಿ. ಯ ಮೂಲಕ ಅಥವಾ ಎನ್.ಎಸ್.ಸಿ. ಮೂಲಕ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಟೆಂಡರ್‌ನೊಡನೆ ಸಲ್ಲಿಸತಕ್ಕದ್ದು ಹಾಗೂ ಮುಂಗಡ ಠೇವಣಿ ಭದ್ರತೆಯ ವ್ಯಾಲಿಡಿಟಿ ಪೀರಿಯಡ್ 90 ದಿವಸಗಳ ಅವಧಿಯಲ್ಲಿ ಒಳಗೊಂಡಿರತಕ್ಕದ್ದು.

3. ಗುತ್ತಿಗೆದಾರರು ಟೆಂಡರ್ ಫಾರಂಗಳಾಗಲಿ ಅರ್ಜಿ ಸಲ್ಲಿಸುವಾಗ ರಿಜಿಸ್ಟ್ರೇಷನ್ ನಕಲನ್ನು ಮತ್ತು ಟೆಂಡರ್‌ಫಾರಂ ಹಣವನ್ನು ನೀಡಬೇಕು ಮತ್ತು ಟೆಂಡರ್ ಫಾರಂಗಳಿಗೆ ಕಟ್ಟಿದ ಹಣವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ.
4. ಕಾಮಗಾರಿಗೆ ಬೇಕಾದ ಸೀಮೆಂಟ್ ಮತ್ತು ಉಕ್ಕನ್ನು ಗುತ್ತಿಗೆದಾರರೇ ಅನುಮೋದಿತ ಗುಣಮಟ್ಟದ ವಸ್ತುಗಳನ್ನು ಖರೀದಿಸಿ ಉಪಯೋಗಿಸಬೇಕು.
5. ಷರತ್ತಿನ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಕಾರ್ಯಪಾಲಕ ಅಭಿಯಂತರರು,
ಪಿ.ಆರ್. 579 ವಿ.ನಾ. ವಿಭಾಗ, ಮಂಡ್ಯ.

**ಜಲ ಸಂಪನ್ಮೂಲ ಇಲಾಖೆ**

**ಪ್ರಿಕ್ವಾಲಿಫಿಕೇಶನ್ ಕಂಡ ಟೆಂಡರ್ ಅವಧಿ ವಿಸ್ತರಣೆ**

**ಪ್ರಕಟಣೆ - 3**

**ನಂ: ಕಾನಿಇಂ:ನಂ.5:ಭನಾವಿ:ವಾ:ಸಇಂ-1:ಪ್ರಿ.ಕ್ವಾ.ಟೆಂಡರ್:ಭ.ಏ.ನೀ:2003-04, ದಿನಾಂಕ: 25ನೇ ಆಗಸ್ಟ್ 2003**

**ವಿಷಯ:** ಪ್ರಿಕ್ವಾಲಿಫಿಕೇಶನ್ ಕಂ ಟೆಂಡರ್ ಪ್ರಕಟಣೆ ದಿ: 25.6.2003ರ ಅವಧಿ ವಿಸ್ತರಣೆ ಕುರಿತು.

**ಉಲ್ಲೇಖ:** 1. ಈ ಕಛೇರಿ ಟೆಂಡರ್ ಪ್ರಕಟಣೆ ಸಂಖ್ಯೆ: ಕಾಇಂ:ನಂ. 5: ಭನಾವಿ:ದಾ:ಸಇಂ1:ಪ್ರಿ.ಕ್ವಾ.ಕಂ.ಟೆಂಡರ್: ಭ.ಏ.ನೀ. ಯೋ:2003-04:810:25: ದಿ: 25.6.2003.
2. ಈ ಕಛೇರಿ ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ ಸಂಖ್ಯೆ: ಕಾಇಂ:ನಂ. 5: ಭನಾವಿ: ದಾ:ಸಇಂ-1: ಪ್ರಿ.ಕ್ವಾ. ಕಂ. ಟೆಂಡರ್: ಭ.ಏ.ನೀ. ಯೋ: 2003-04: 1161:25, ದಿನಾಂಕ: 17.7.2003 ರ ಪತ್ರ.
3. ಈ ಕಛೇರಿ ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ ಸಂಖ್ಯೆ: ಕಾಇಂ: ಭನಾವಿ5:ದಾ: ಸಇಂ-1: ಪ್ರಿ.ಕ್ವಾ.ಕಂ. ಟೆಂಡರ್: ಭ.ಏ.ನೀ.ಯೋ: 2003-04: 1517:25, ದಿನಾಂಕ: 11.8.2003ರ ಪತ್ರ.

ಉಲ್ಲೇಖಿತ ಪತ್ರ (1)ದ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಗೆ ಸಂಬಂಧಿಸಿದಂತೆ ಈ ಕೆಳಗಿನಂತೆ ಮಾತ್ರ ಟೆಂಡರ್ ಅವಧಿಯನ್ನು ಪುನಃ ವಿಸ್ತರಣೆ ಮಾಡಲಾಗಿದೆ.

1. ಖಾಲಿ ಪ್ರಿಕ್ವಾಲಿಫಿಕೇಶನ್ ಕಂ ಟೆಂಡರ್ ಶೆಡ್ಯೂಲ್‌ಗಳನ್ನು ನೀಡುವ ದಿನಾಂಕ: 15.9.2003 ಮತ್ತು 16.9.2003 (ಸಂಜೆ 5.30 ರವರೆಗೆ)
2. ಭರ್ತಿ ಮಾಡಿದ ಪ್ರಿಕ್ವಾಲಿಫಿಕೇಶನ್ ಕಂ ಟೆಂಡರ್ ಶೆಡ್ಯೂಲ್‌ಗಳನ್ನು ಸಲ್ಲಿಸುವ ದಿನಾಂಕ: 22.9.2003 (ಮಧ್ಯಾಹ್ನ 4.00 ಗಂಟೆಯವರೆಗೆ)
3. ಪ್ರಿಕ್ವಾಲಿಫಿಕೇಶನ್ ದಾಖಲೆಗಳನ್ನು ತೆರೆಯುವ ದಿನಾಂಕ: 23.9.2003 (ಬೆಳಿಗ್ಗೆ 11.00 ಗಂಟೆಗೆ)

ಈ ಮೇಲಿನ ಅಂಶಗಳನ್ನು ಹೊರತಾಗಿ ಉಳಿದೆಲ್ಲಾ ಅಂಶಗಳು ಮೂಲ ಟೆಂಡರ್ ಪ್ರಕಟಣೆಯಲ್ಲಿ ಇರುವಂತೆ ಇದ್ದು ಯಾವ ಬದಲಾವಣೆಗಳು ಇರುವುದಿಲ್ಲ.

**ಕೆ.ಎನ್. ಪುಟ್ಟಸ್ವಾಮಿ**
ಪಿ.ಆರ್. 580 ಕಾರ್ಯಪಾಲಕ ಇಂಜಿನಿಯರ್,
ನಂ. 5, ಭದ್ರಾ ನಾಲಾ ವಿಭಾಗ, ದಾವಣಗೆರೆ.

**ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ,**

**ಅಂಚೆಚೀಲ-5313, ಬಹುಮಹಡಿ ಕಟ್ಟಡ, 2ನೇ ಹಂತ, 2ನೇ ಮಹಡಿ, ಬೆಂಗಳೂರು**

**ಅಧಿಸೂಚನೆ**

**ಸಂ: ಸಿ1/ಸಿಆರ್-76/2001-02, ದಿನಾಂಕ: 23ನೇ ಆಗಸ್ಟ್ 2003**

**ವಿಷಯ** ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿನ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಸಂಬಂಧದಲ್ಲಿ ಹೆಚ್ಚುವರಿ ಆಯ್ಕೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ** ಈ ಕಛೇರಿಯ ಇದೇ ಸಮ ಸಂಖ್ಯೆಯ ದಿನಾಂಕ: 23.10.2002 ರ ಅಧಿಸೂಚನೆ.

ಈ ನ್ಯಾಯಾಧಿಕರಣದ ಇದೇ ಸಮಸಂಖ್ಯೆಯ ದಿನಾಂಕ: 26.12.2001ರ ಮೇರೆಗೆ ಒಂದು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಸ್ವೀಕೃತವಾದ ಅರ್ಜಿಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ ಮೀಸಲಿಟ್ಟು ಭರ್ತಿಯಾಗದ ರಿಕ್ತ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಮೇರೆಗೆ (ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001) 29 ವರ್ಷ ತುಂಬಿದ್ದು 40 ವರ್ಷದೊಳಗಿನ ಮೀಸಲಾತಿ ವರ್ಗೀಕರಣದಂತೆ ಶ್ರೀ ಶಿವಪುತ್ರ ಬಿನ್ ಶಂಕರಪ್ಪ ಬಜಂತ್ರಿ, ಹತ್ತರಕಿಹಾಳ ಇವರನ್ನು ಉಲ್ಲೇಖಿತ ಅಧಿಸೂಚನೆಯಲ್ಲಿ ಆಯ್ಕೆ ಮಾಡಲಾಗಿತ್ತು. ಈ ಕಛೇರಿಯ ದಿನಾಂಕ: 19.7.2003 ರ ಪತ್ರದ ಮೇರೆಗೆ ಸರ್ಕಾರದವರು ತಮ್ಮ ಪತ್ರದ ಸಂಖ್ಯೆ: ಸಿಆಸುಇ 29 ಸೆಹಿಮ 03 ದಿನಾಂಕ: 5.8.2003ರ ಪತ್ರದಲ್ಲಿ ಸದರಿ ನಿಯಮಾವಳಿಯ ನಿಯಮ 6ರಲ್ಲಿ ತಿದ್ದುಪಡಿ ಮಾಡಿ ಹೆಚ್ಚುವರಿ ಆಯ್ಕೆ ಪಟ್ಟಿ ತಯಾರಿಸುವ ಬಗ್ಗೆ ಆಸ್ಪದ ಕಲ್ಪಿಸಲಾಗಿದೆ ಎಂದೂ, ಸದರಿ ಹುದ್ದೆಗೆ ಹೆಚ್ಚುವರಿ ಪಟ್ಟಿಯಲ್ಲಿನ ಅಭ್ಯರ್ಥಿಯನ್ನು ನೇಮಕಾತಿ ಮಾಡಲು ಅವಕಾಶ ಇರುವುದರಿಂದ ಮುಖ್ಯ ಪಟ್ಟಿ ತಯಾರಿಸುವುದರ ಜೊತೆಗೆ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ತಯಾರಿಸಲು ಕ್ರಮ ತೆಗೆದುಕೊಳ್ಳಬಹುದೆಂದು ತಿಳಿಸಿದ್ದಾರೆ. ಆದ್ದರಿಂದ ಈ ಅಧಿಸೂಚನೆ.

**ಅಧಿಸೂಚನೆ**

ಮೇಲ್ಕಂಡ ಪ್ರಸ್ತಾವನೆಯಲ್ಲಿರುವಂತೆ, ಈ ನ್ಯಾಯಾಧಿಕರಣದ ಪರಿಶಿಷ್ಟ ಜಾತಿಯ ಒಂದು ಬ್ಯಾಕ್‌ಲಾಗ್ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿ1/ಸಿಆರ್70/2001-02 ದಿನಾಂಕ: 23.10.2002 ರಲ್ಲಿ ಪ್ರಕಟಿಸಿರುವ ಮುಖ್ಯ ಪಟ್ಟಿಯನ್ನು ಪ್ರಕಟಿಸಲಾಗಿದೆ.

**ಹೆಚ್ಚುವರಿ ಆಯ್ಕೆ ಪಟ್ಟಿ**

**ಪ್ರಥಮ ದರ್ಜೆ ಸಹಾಯಕರ ಹುದ್ದೆ - 1 ಬ್ಯಾಕ್ ಲಾಗ್ ಹುದ್ದೆ**

| ಕ್ರಮ ಸಂಖ್ಯೆ | ಪರಿಶಿಷ್ಟ ಜಾತಿ (ಸಾಮಾನ್ಯ) | ಹುಟ್ಟಿದ ತಾರೀಖು | ಪದವಿಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ |
|---|---|---|---|
| 1 | ಶ್ರೀ ದೊಡ್ಡಪ್ಪ ಶಿವಾದಾರ ವಾರ್ಡ್ ನಂ: 3, ಮನೆ ಸಂ. 459, ಮುಧೋಳ - 587313 ಬಾಗಲಕೋಟೆ ಜಿಲ್ಲೆ | 20.7.1967 | 76-80 |

ನೇಮಕಾತಿಯಂತೆ ಈ ಅಭ್ಯರ್ಥಿಯು ಎಲ್ಲಾ ವಿಧದಲ್ಲೂ ಅರ್ಹರಾಗುವ ಬಗ್ಗೆ ವಿಚಾರಣೆಗೆ ಒಳಪಡುತ್ತಾರೆ. ಈ ಹೆಚ್ಚುವರಿ ಆಯ್ಕೆಯಲ್ಲಿನ ಅಭ್ಯರ್ಥಿಯು ನೇಮಕಾತಿಗೆ ಯಾವುದೇ ಹಕ್ಕನ್ನು ಹೊಂದಿರುವುದಿಲ್ಲ.

(ಮಾನ್ಯ ಅಧ್ಯಕ್ಷರ ಆದೇಶದ ಮೇರೆಗೆ)

ನಿಬಂಧಕರು,

ಪಿ.ಆರ್. 581 ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು.

**ಗೃಹರಕ್ಷಕದಳ ಮತ್ತು ಪೌರರಕ್ಷಣಾ ಕೇಂದ್ರ ಕಚೇರಿ, ಕರ್ನಾಟಕ ರಾಜ್ಯ, ನಂ. 1, ಅ.ಮೊ. ರಸ್ತೆ, ಬೆಂಗಳೂರು-560042**

**ನೇಮಕಾತಿ ಆದೇಶ**

**ಸಂಖ್ಯೆ: ಸಿಬ್ಬಂದಿ (1) 65:ಸಿಜಿಹಿ:2001-02, ದಿನಾಂಕ: 25ನೇ ಆಗಸ್ಟ್ 2003**

**ವಿಷಯ** ಸೈನಿಕ ವೃಂದದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಬ್ಯಾಕ್‌ಲಾಗ್ ಹುದ್ದೆಗಳಿಗೆ ನೇಮಕಾತಿ.

**ಉಲ್ಲೇಖ**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿ.ಪಿ.ಎ.ಆರ್. 13:ಎಸ್.ಬಿ.ಸಿ. 2001, ದಿನಾಂಕ: 21.11.2001.
2. ಅರ್ಜಿಗಳನ್ನು ಆಹ್ವಾನಿಸಿ ಕರ್ನಾಟಕ ರಾಜ್ಯಪತ್ರ ದಿನಾಂಕ: 17.1.2002 ರಲ್ಲಿ ಪ್ರಕಟಿಸಲಾದ ಆಯ್ಕೆ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರ್ದೇಶಕರು ಹಾಗೂ ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ಪೌರರಕ್ಷಣಾ ದಳದ ನಿರ್ದೇಶಕರವರ ಇದೇ ಸಮಸಂಖ್ಯೆ ದಿನಾಂಕ: 1.1.2002ರ ಅಧಿಸೂಚನೆ.
3. ಕರ್ನಾಟಕ ರಾಜ್ಯಪತ್ರ ದಿನಾಂಕ: 3.4.2003 ರಲ್ಲಿ ಪ್ರಕಟಗೊಂಡಿರುವ ಅಯ್ಕೆ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ಪೌರರಕ್ಷಣಾ ನಿರ್ದೇಶಕರು, ಬೆಂಗಳೂರು ರವರ ಇದೇ ಸಮಸಂಖ್ಯೆ ದಿನಾಂಕ: 25.10.2002 ರಲ್ಲಿ ಹೊರಡಿಸಿದ ಅಧಿಸೂಚನೆ.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 1.6.2002.
5. ಈ ಕಚೇರಿಯ ಇದೇ ಸಮಸಂಖ್ಯೆ ದಿನಾಂಕ: 17.5.2003ರ ನೇಮಕಾತಿ ಆದೇಶ.

ಕರ್ನಾಟಕ ರಾಜ್ಯ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವ್ಯಕ್ತಿಗಳಿಗೆ ಮೀಸಲಿಟ್ಟ ಭರ್ತಿಯಾಗದ ಹುದ್ದೆಗೆ ನೇಮಕಾತಿ ಮಾಡಲು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವ್ಯಕ್ತಿಗಳಿಗೆ ಮೀಸಲಿಟ್ಟ ಭರ್ತಿಯಾಗದ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್: 13: ಎಸ್‌ಬಿಸಿ: 2001, ದಿನಾಂಕ: 21.11.2001 ರಲ್ಲಿ ಪ್ರಕಟಿಸಿರುತ್ತದೆ.

ಮೇಲೆ ಹೇಳಿದ ಅಧಿಸೂಚನೆ ದಿನಾಂಕ: 21.11.2001 ರ ಅನುಸಾರ ಆಯ್ಕೆ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರ್ದೇಶಕರು ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ಪೌರರಕ್ಷಣಾ ನಿರ್ದೇಶಕರು, ಬೆಂಗಳೂರು, ತಮ್ಮ ನಿರ್ದೇಶನಾಲಯದಲ್ಲಿ, ಬಾಕಿ ಇರುವ ಮೀಸಲಿಟ್ಟ ಹುದ್ದೆಗಳಿಗೆ ಅರ್ಜಿಯನ್ನು ಆಹ್ವಾನಿಸಿ, ಇದೇ ಸಮಸಂಖ್ಯೆ ದಿನಾಂಕ: 1.1.2002 ರಲ್ಲಿ ಹೊರಡಿಸಿದ ಅಧಿಸೂಚನೆಯು, ಕರ್ನಾಟಕ ರಾಜ್ಯಪತ್ರ ದಿನಾಂಕ: 17.1.2002 ರಲ್ಲಿ ಅಧಿಸೂಚನೆ ದಿನಾಂಕ: 21.11.2001ರ ನಿಯಮ 5(2)ರ ಪ್ರಕಾರ ಪ್ರಕಟಗೊಂಡಿರುತ್ತೆ.

ಆಯ್ಕೆ ಪ್ರಾಧಿಕಾರ ಮತ್ತು ಗೃಹರಕ್ಷಕ ದಳ ಮತ್ತು ಪೌರರಕ್ಷಣಾ ದಳದ ನಿರ್ದೇಶನಾಲಯದ ಅಧಿಸೂಚನೆ ದಿನಾಂಕ: 1.1.2002 ರ ಅನುಗುಣವಾಗಿ ಸ್ವೀಕೃತವಾದ ಅಭ್ಯರ್ಥಿಗಳ ಅರ್ಜಿಗಳನ್ನು ಪರಿಶೀಲಿಸಿ ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿ ಹಾಗೂ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಜೇಷ್ಠತೆಯ ಆಧಾರದ ಮೇರೆಗೆ, ಆಯ್ಕೆ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ಪೌರರಕ್ಷಣಾ ನಿರ್ದೇಶಕರು, ಬೆಂಗಳೂರು, ಇದೇ ಸಮಸಂಖ್ಯೆ 25.10.2002 ರಲ್ಲಿ ಹೊರಡಿಸಿದ ಅಧಿಸೂಚನೆಯನ್ನು ದಿನಾಂಕ: 21.11.2001ರ ಸರ್ಕಾರದ ಅಧಿಸೂಚನೆಯ ನಿಯಮ 6(2)ರ ಪ್ರಕಾರ ಕರ್ನಾಟಕ ರಾಜ್ಯಪತ್ರ ದಿನಾಂಕ: 3.4.2003 ರಲ್ಲಿ ಪ್ರಕಟಿಸಲಾಗಿರುತ್ತದೆ.

ಈ ಮೇರೆಗೆ, ಉಲ್ಲೇಖ (3)ರ ಅಧಿಸೂಚನೆಯಲ್ಲಿ ಪ್ರಕಟಿಸಲಾದ ಆಯ್ಕೆಪಟ್ಟಿಯಲ್ಲಿನ ನಾಲ್ವರು ಅಭ್ಯರ್ಥಿಗಳಿಗೆ ಉಲ್ಲೇಖ (5) ರಲ್ಲಿನ ನೇಮಕಾತಿ ಆದೇಶದ ಮುಖೇನ ಸೈನಿಕ ಹುದ್ದೆಗೆ ನೇಮಕ ಮಾಡಿ ಬೆಂಗಳೂರಿನ ಗೃಹರಕ್ಷಕ ಮತ್ತು ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯದಲ್ಲಿ ಖಾಲಿಯಿರುವ ಸೈನಿಕ ಹುದ್ದೆಗಳಿಗೆ ನೇಮಕ ಮಾಡಲಾಗಿತ್ತು. ನೇಮಕಗೊಂಡ ನಾಲ್ವರು ಅಭ್ಯರ್ಥಿಗಳ ಪೈಕಿ, ನೇಮಕಾತಿ ಆದೇಶದ ಕ್ರಮ ಸಂಖ್ಯೆ. 3 ರಲ್ಲಿನ ಅಭ್ಯರ್ಥಿ ಶ್ರೀ ಹೆಚ್. ಅಶ್ವತ್ಥಪ್ಪ (ಪರಿಶಿಷ್ಟ ವರ್ಗ - ಸಾಮಾನ್ಯ ಅಭ್ಯರ್ಥಿ) ಎಂಬುವವರು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲ. ನೇಮಕಾತಿ ಆದೇಶದಲ್ಲಿ ಸ್ಪಷ್ಟಪಡಿಸಲಾದಂತೆ, ಅಭ್ಯರ್ಥಿ ನಿಗದಿತ ಅವಧಿ 15 ದಿನಗಳ ಒಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಇರುವುದರಿಂದ ಸದರಿ ಅಭ್ಯರ್ಥಿಯ ನೇಮಕಾತಿಯು ರದ್ದಾಗಿರುತ್ತದೆ.

ಆದ್ದರಿಂದ, ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) 1957ರ ನಿಯಮ 7(2) ಶೆಡ್ಯೂಲ್-II ಹಾಗೂ ಕರ್ನಾಟಕ ಸರ್ಕಾರದ ಸಾಮಾನ್ಯ ಆಡಳಿತ ಸಚಿವಾಲಯದ ಅಧಿಸೂಚನೆ: ಜಿಎಡಿ 36 ಎಸ್‌ಎಸ್‌ಆರ್ 76 ದಿನಾಂಕ: 30.7.1976 ಮತ್ತು ಮೇಲೆ ಹೇಳಿದ ಉಲ್ಲೇಖ (1) ರಲ್ಲಿನ ಅಧಿಸೂಚನೆ ನಿಯಮ 7(1) ರಲ್ಲಿ ಪ್ರದತ್ತವಾಗಿರುವ ಅಧಿಕಾರದ ಅಡಿಯಲ್ಲಿ ಉಲ್ಲೇಖ (3)ರ ಅಧಿಸೂಚನೆಯಲ್ಲಿನ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಅದೇ ವರ್ಗದಿಂದ ಅಂದರೆ ಪರಿಶಿಷ್ಟ ವರ್ಗದಿಂದ (ಸಾಮಾನ್ಯ ಅಭ್ಯರ್ಥಿ) ಆಯ್ಕೆಯಾಗಿರುವ ಅಭ್ಯರ್ಥಿ ಶ್ರೀ ಹೆಚ್. ತಿಪ್ಪೇಸ್ವಾಮಿ, (ಜನ್ಮ ದಿನಾಂಕ: 8.12.1966) ಬಿನ್ ನೀ. ಹನುಮಂತಪ್ಪ, ಕಡೇಹುಡೆ ಗ್ರಾಮ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರನ್ನು ರೂ. 3000-75-3450-100-4450-125-5450ರ ಕಾಲಿಕ ವೇತನ ಶ್ರೇಣಿಯಲ್ಲಿ ಕಾಲದಿಂದ ಕಾಲಕ್ಕೆ ಜಾರಿಯಲ್ಲಿದ್ದು, ಅನ್ವಯಿಸುವ ಇತರೆ ಭತ್ಯೆಗಳೊಂದಿಗೆ ಸೈನಿಕ ಹುದ್ದೆಗೆ ನೇಮಕ ಮಾಡಿ, ಬೆಂಗಳೂರಿನ ಗೃಹರಕ್ಷಕ ಮತ್ತು ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯದಲ್ಲಿ ಖಾಲಿ ಇರುವ ಸೈನಿಕ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಈ ನೇಮಕಾತಿಯು ಅಭ್ಯರ್ಥಿಯು ಅವರ ಶಾರೀರಿಕ ಅರ್ಹತೆ ಮತ್ತು ಸಕ್ರಿಯ ಹೊರಾಂಗಣ ಕರ್ತವ್ಯ ನಿರ್ವಹಣೆ ಕುರಿತಂತೆ ಕರ್ನಾಟಕದಲ್ಲಿನ ವೈದ್ಯಕೀಯ ಮಂಡಳಿಯು ದೃಢೀಕರಿಸುವ ಷರತ್ತಿಗೆ ಒಳಪಟ್ಟಿರುತ್ತದೆ. ಅಲ್ಲದೆ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಹಾಗೂ ಆದೇಶಗಳಿಗೆ ಒಳಪಡುತ್ತದೆ. ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಪರೀಕ್ಷಾ ಅವಧಿಯಲ್ಲಿ ಇರತಕ್ಕದ್ದು. ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆಯಾಗತಕ್ಕದ್ದು, ಅಲ್ಲದೆ ಕನಿಷ್ಟ 6 ತಿಂಗಳ ಅವಧಿಗೆ ಸೇವಾನಿರತ ವೃತ್ತಿಪರ ತರಬೇತಿ ಪಡೆಯತಕ್ಕದ್ದು.

ಅಭ್ಯರ್ಥಿಗಳು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಂದರ್ಭದಲ್ಲಿ ಕೆಳಕಂಡ ದಾಖಲೆಗಳನ್ನು ಸಲ್ಲಿಸತಕ್ಕದ್ದು.

1. ಶಾರೀರಿಕ ಸುಸ್ಥಿತಿಯ ಬಗ್ಗೆ ಜಿಲ್ಲಾ ಸರ್ಜನ್‌ರವರಿಂದ ನೀಡಲಾದ ಶಾರೀರಿಕ ಅರ್ಹತಾ ಪ್ರಮಾಣ ಪತ್ರ.
2. ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆಯಲಾದ ನಡತೆ: ಶೀಲ ಪ್ರಮಾಣ ಪತ್ರಗಳು.
3. ಆಸ್ತಿ ಮತ್ತು ಸಾಲದ ವಿವರಗಳು, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 23(1)ರ ಅನ್ವಯ.
4. ಸ್ವಂತ ಊರು, ಸಾಮೂಹಿಕ ವಿಮಾ ಯೋಜನೆ, ಕುಟುಂಬ ನಿವೃತ್ತಿ ವೇತನ ಮೊದಲಾದವುಗಳ ಕುರಿತು ನಾಮ ನಿರ್ದೇಶನ ಪತ್ರ.
5. ವೈವಾಹಿಕ ಸ್ಥಿತಿಯ ಬಗ್ಗೆ ದೃಢೀಕರಣ ಪತ್ರ.
6. ಭಾರತ ಸಂವಿಧಾನದ ಬಗ್ಗೆ ನಿಷ್ಠೆ ಕುರಿತು ಪ್ರಮಾಣ.
7. ಸಂಬಂಧಿಸಿದ ನೋಂದಣಿ ಅಧಿಕಾರಿಯವರು ನೀಡಿದ ಜನ್ಮ ದಿನಾಂಕದ ದೃಢೀಕರಣ ಪತ್ರ.

ಹುದ್ದೆಗೆ ಸಲ್ಲಿಸಿದ ಅರ್ಜಿಯಲ್ಲಿ ಹಾಗೂ ತದನಂತರ, ಗೃಹರಕ್ಷಕ ದಳ ಮತ್ತು ಪೌರರಕ್ಷಣಾ ನಿರ್ದೇಶನಾಲಯಕ್ಕೆ ಸಲ್ಲಿಸಿದ ಅರ್ಹ ಶೈಕ್ಷಣಿಕ ವಿದ್ಯಾರ್ಹತೆಯ ದಾಖಲಾತಿಗಳ ಅಂಕಪಟ್ಟಿ, ಟಿ.ಸಿ. ಹಾಗೂ ಇತರೆ ದಾಖಲಾತಿಗಳಲ್ಲಿ ಲೋಪದೋಷ ಕಂಡು ಬಂದಲ್ಲಿ ಹಾಗೂ ಹುದ್ದೆಗೆ ಸಲ್ಲಿಸಿರುವ ಅರ್ಜಿಯಲ್ಲಿ ಖಾಯಂ ವಾಸಸ್ಥಳ ಮತ್ತು ಇತರೆ ಮಾಹಿತಿಗಳ ಬಗ್ಗೆ ಸತ್ಯವನ್ನು ಮರೆಮಾಚಿದ್ದು ಕಂಡುಬಂದಲ್ಲಿ ಹಾಗೂ ನಡತೆ: ಪೂರ್ವ ವೃತ್ತಾಂತಗಳ ಕುರಿತಂತೆ ಮತ್ತು ಜಾತಿ ಸಿಂಧುತ್ವ ಕುರಿತಂತೆ ಪ್ರತಿಕೂಲ ಷರಾಗಳು ವರದಿಯಾದಲ್ಲಿ, ಅಭ್ಯರ್ಥಿಯು ಹುದ್ದೆಯಲ್ಲಿ ಮುಂದುವರೆಯಲು ಅರ್ಹರಾಗಿರುತ್ತಾರೆ.

ಅಭ್ಯರ್ಥಿಯು, ಈ ಆದೇಶದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ ಈ ಕೆಳಗೆ ಸಹಿ ಮಾಡಿರುವ ನೇಮಕಾತಿ ಪ್ರಾಧಿಕಾರದ ಮುಂದೆ ವರದಿ ಮಾಡಿಕೊಳ್ಳತಕ್ಕದ್ದು. ನಿಗದಿತ ಅವಧಿಯೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಈ ಆದೇಶವು ರದ್ದಾಗುತ್ತದೆಂದು ಹಾಗೂ ನೇಮಕಾತಿಯ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

**ಎನ್. ಶಂಕರಯ್ಯ**
ಸಮಾದೇಷ್ಟರು
ಗೃಹರಕ್ಷಕದಳ ಮತ್ತು ಪೌರರಕ್ಷಣಾ ತರಬೇತಿ ಮಹಾ
ವಿದ್ಯಾಲಯ, ಬೆಂಗಳೂರು ಹಾಗೂ ನೇಮಕಾತಿ ಪ್ರಾಧಿಕಾರ.

ಪಿ.ಆರ್. 582

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ ವಿಭಾಗ, ದಾವಣಗೆರೆ

## ಅಲ್ಪಾವಧಿ ಟೆಂಡರ್ ಪ್ರಕಟಣೆ (ಮರು ಟೆಂಡರ್)

**ಪ್ರಕಟಣೆ: ಸಂ/ಕಾಅ/ದಾವಿದಾ/ಕಟ್ಟಡಗಳು/ಎಇ2/959/2003-04, ದಿನಾಂಕ: 23ನೇ ಆಗಸ್ಟ್ 2003**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ, ಈ ಕೆಳಕಂಡ ಕಾಮಗಾರಿಗೆ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿದ ಗುತ್ತಿಗೆದಾರರಿಂದ ಐಟಂವಾರು ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಈ ಕೆಳಗಡೆ ಸಹಿ ಮಾಡಿರುವವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅಂದೇ ಟೆಂಡರನ್ನು ತೆರೆಯಲಾಗುವುದು. ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಸದರಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಗುತ್ತಿಗೆದಾರರು ಟೆಂಡರ್‌ನೊಂದಿಗೆ ಈ ಕೆಳಕಂಡ ಅಂಶಗಳಿಗೆ ತೃಪ್ತಿಕರವಾದ ಆಧಾರಗಳೊಂದಿಗೆ ಕಾರ್ಯಪಾಲಕ ಅಭಿಯಂತರವರಿಗೆ ಸಲ್ಲಿಸತಕ್ಕದ್ದು. ಈ ಕೆಳಕಂಡ ಅವಶ್ಯಕ ದಾಖಲೆಗಳನ್ನು ತೃಪ್ತಿಕರವಾಗಿ ನೀಡದೇ ಇರುವ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

## ಷರತ್ತುಗಳು

1. ಗುತ್ತಿಗೆದಾರರು ಹಿಂದಿನ ಐದು ವರ್ಷದಲ್ಲಿ ಒಂದು ಆರ್ಥಿಕ ವರ್ಷದಲ್ಲಿ ಕೆಳಕಂಡ ಕಾಮಗಾರಿಯ ಮೊತ್ತದ ಶೇಕಡಾ 30ಕ್ಕೆ ಕಡಿಮೆ ಇಲ್ಲದಂತೆ ಅದೇ ತರಹದ ಒಂದು ಕಾಮಗಾರಿಯನ್ನು ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು.
2. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೇ ಮಧ್ಯದಲ್ಲಿ ತೊರೆದಿರಬಾರದು.
3. ಕಾಮಗಾರಿಗೆ ಅವಶ್ಯಕವಾದ ಯಂತ್ರೋಪಕರಣ ಮತ್ತು ಸಾಮಗ್ರಿಗಳನ್ನು ಹೊಂದಿರಬೇಕು.
4. ಕಾಮಗಾರಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
5. ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
6. ಸಂಬಂಧಿಸಿದ ಗುತ್ತಿಗೆದಾರ ತಾವು ನಿರ್ವಹಿಸಿದ ಕಾಮಗಾರಿಯನ್ನು ಒಂದು ವರ್ಷದವರೆಗೂ ಸುಸ್ಥಿತಿಯಲ್ಲಿ ಕಾಯ್ದುಕೊಳ್ಳತಕ್ಕ ಜವಾಬ್ದಾರಿ ಅವರ ಮೇಲಿರುತ್ತದೆ.
7. ಮುಂಗಡ ಠೇವಣಿ ಹಣವನ್ನು ಕಾರ್ಯಪಾಲಕ ಇಂಜಿನಿಯರ್, ಲೋಇ ವಿಭಾಗ, ದಾವಣಗೆರೆ ಇವರ ಹೆಸರಿಗೆ ಅನುಸೂಚಿತ ಬ್ಯಾಂಕ್‌ಗಳ ಡಿ.ಡಿ./ಬ್ಯಾಂಕ್ ಗ್ಯಾರಂಟಿ/ಎಫ್.ಡಿ.ಆರ್. ಮುಖಾಂತರ ಪಡೆಯತಕ್ಕದ್ದು ಹಾಗೂ ಟೆಂಡರ್ ಸಲ್ಲಿಸುವಾಗ ಲಗತ್ತಿಸತಕ್ಕದ್ದು. ವ್ಯಾಲಿಡಿಟಿ ಅವಧಿ 90 (ತೊಂಭತ್ತು) ದಿನಗಳ ಅವಧಿಯನ್ನು ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆ ಅದೇ ಅವಧಿಗೆ ಬೇಕಾಗುತ್ತದೆ.
8. ಟೆಂಡರ್ ದಾಖಲೆಗಾಗಿ ಅರ್ಜಿ ಜೊತೆಯಲ್ಲಿ ಗುತ್ತಿಗೆದಾರರು ಚಾಲ್ತಿ ನೋಂದಣಿ ಪತ್ರ/ಪಾಸ್ ಬುಕ್ ಮತ್ತು ಚಾಲ್ತಿ ಸಾಲಿನ ಆದಾಯ ತೆರಿಗೆ ವಿಮೋಚನೆ ಪತ್ರದ ಪ್ರತಿಯನ್ನು ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.
9. ನಿಬಂಧನೆಯುಕ್ತ ಟೆಂಡರ್ ಹಾಗೂ ಮುಂಗಡ ಠೇವಣಿ ರಹಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10. ಖಾಲಿ ಟೆಂಡರ್ ಪುಸ್ತಕ ಖರೀದಿಸಿ ಟೆಂಡರ್ ಹಾಕದೇ ಇದ್ದಲ್ಲಿ, ಸಲ್ಲಿಸಿದರೂ ಭರ್ತಿ ಮಾಡದೇ ಇದ್ದಲ್ಲಿ, ಟೆಂಡರ್‌ನೊಂದಿಗೆ ಮುಂಗಡ ಠೇವಣಿ ಲಗತ್ತಿಸದಿದ್ದಲ್ಲಿ ಅಥವಾ ಟೆಂಡರ್ ನಿಯಮಗಳನ್ನು ಪಾಲಿಸದಿದ್ದಲ್ಲಿ ದಾಖಲು ಮಾಡಲಾಗುವುದು. ಸತತವಾಗಿ 3 (ಮೂರು) ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
11. ಟೆಂಡರ್ ಡಾಕ್ಯುಮೆಂಟ್‌ಗಳಲ್ಲಿ ಪಿಡಬ್ಲ್ಯೂಜಿ 66 ಮತ್ತು 65 ರಲ್ಲಿನ ಷೆಡ್ಯೂಲ್‌ಗಳಲ್ಲಿ ವಿವರಗಳನ್ನು ತಪ್ಪದೇ ನೀಡತಕ್ಕದ್ದು ಮತ್ತು ರುಜುಗಳನ್ನು ತಪ್ಪದೇ ಮಾಡತಕ್ಕದ್ದು.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷ ರೂ.) | ಟೆಂಡರ್ ಗಿಟ್ಟ ಮೊತ್ತ (ಲಕ್ಷ ರೂ) | ಇ.ಎಂ.ಡಿ. ಮೊತ್ತ | ಟೆಂಡರ್ ಫಾರಂ ಬೆಲೆ | ಅರ್ಹ ರಾದ ಗುತ್ತಿಗೆ ದಾರರು | ಟೆಂಡರ್ ಕಾಮಗಾರಿ ಯನ್ನು ಪರಿ ಪೂರ್ಣವಾಗಿ ಮುಗಿಸಲು ನಿಗದಿ ಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿ: ಸಂಜೆ 5.30 ವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ: ಸಂಜೆ: 5.30 ರವರೆಗೆ | ಭರ್ತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ: ಸಂಜೆ 4.00 ರವರೆಗೆ | ಷರಾ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಹೊನ್ನಾಳಿ ತಾಲ್ಲೂಕು, ಜೀನಹಳ್ಳಿ ಗ್ರಾಮದಲ್ಲಿ ಪದವಿ ಪೂರ್ವ ಕಾಲೇಜು ಕಟ್ಟಡ ನಿರ್ಮಾಣ (ಮೊದಲನೆ ಅಂತಸ್ತು) | 35.00 | 9.30 | 18600 | 2500 + KST | ಮೂರನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳೂ ಮಳೆಗಾಲ ಸೇರಿ | 12.9.03 | 17.9.03 | 20.9.03 | ಐಟಂ ವಾರು |

ಬಿ.ಕೆ. ನಿಂಗಪ್ಪ
ಕಾರ್ಯಪಾಲಕ ಅಭಿಯಂತರರು,
ಲೋ.ಇ. ವಿಭಾಗ, ದಾವಣಗೆರೆ.

ಪಿ.ಆರ್. 583

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು-560001

## ಮರು ಟೆಂಡರ್ ಪ್ರಕಟಣೆ

**ಸಂಖ್ಯೆ: ಸಂಗ್ರಹ-1(3)79/2003-04, ದಿನಾಂಕ: 26ನೇ ಆಗಸ್ಟ್ 2003**

2001-02ನೇ ಸಾಲಿಗೆ ಪೊಲೀಸ್ ಇಲಾಖೆಗೆ ಅಗತ್ಯವಿರುವ ಈ ಕೆಳಕಂಡ ಸಮವಸ್ತ್ರ ಮತ್ತು ಸಾಧನ ಸಾಮಗ್ರಿಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "ದ್ವಿ ಲಕೋಟೆ ಪದ್ಧತಿ" ಯಲ್ಲಿ ಆಹ್ವಾನಿಸಲಾಗಿದೆ. ಟೆಂಡರ್ ಜೊತೆಯಲ್ಲಿ ಭಾಗವಹಿಸುವ ಪ್ರತಿ ಸಾಮಗ್ರಿಯ ಮಾದರಿಯ 3 ಸಾಮಗ್ರಿಗಳನ್ನು ಕಳುಹಿಸಬೇಕಾಗಿರುತ್ತದೆ.

| ಕ್ರ. ಸಂ. | ಸಾಮಗ್ರಿಗಳ ಹೆಸರು | ಖರೀದಿಸುವ ಸಾಮಗ್ರಿಗಳ ಅಂದಾಜು ಪ್ರಮಾಣ |
|---|---|---|
| 1 | ಡಿ.ಎಂ.ಎಸ್. ಅಮ್ಯುನೇಷನ್ ಬ್ಲಾಕ್ ಶೂ | 1,900 ಜೊತೆ |
| 2 | ಡಿ.ಎಂ.ಎಸ್. ಆಂಕಲ್ ಬ್ಲಾಕ್ ಶೂ | 18,402 ಜೊತೆ |
| 3 | ಕಂದು ಗೈಟರ್ಸ್ | 17 ಜೊತೆ |
| 4 | ಕಂದು ಪಟನ್ ಸ್ಯಾಂಡಲ್ | 140 ಜೊತೆ |
| 5 | ಕಂದು ಲೆದರ್ ಬೆಲ್ಟ್ ಬ್ರಾಸ್ ಬಕಲ್ | 127 ಸಂಖ್ಯೆ |
| 6 | ಕ್ಯಾವಲರಿ ಬೂಟ್ | 140 ಜೊತೆ |
| 7 | ಉಲ್ಲನ್ ಖಾಕಿ ಸರ್ಜ್ ಪಟ್ಟಿ | 280 ಸಂಖ್ಯೆ |
| 8 | ನಿಕಲ್ ಸ್ಪರ್ಸ್ | 140 ಸಂಖ್ಯೆ |
| 9 | ರೆಡ್ ಸಾಸ್ | 157 ಸಂಖ್ಯೆ |
| 10 | ರೈಡಿಂಗ್ ಪಿ.ಟಿ. ಬೆಲ್ಟ್ | 140 ಸಂಖ್ಯೆ |
| 11 | ಟೆಂಟ್ ಕ್ಲಬ್ ಹ್ಯಾಟ್ | 140 ಜೊತೆ |
| 12 | ನೈಲಾನ್ ವೆಬ್ ಬೆಲ್ಟ್ | 949 ಸಂಖ್ಯೆ |
| 13 | ಲೆದರ್ ಜರ್ಕಿನ್ | 29 ಸಂಖ್ಯೆ |
| 14 | ವಾಟರ್ ಬಾಟಲ್ | 6629 ಸಂಖ್ಯೆ |
| 15 | ಪೊಲೀಸ್ ಧ್ವಜ | 100 ಸಂಖ್ಯೆ |
| 16 | ಸ್ವೋರ್ಡ್ಸ್ (ಖಡ್ಗ) | 50 ಸಂಖ್ಯೆ |
| 17 | ರಿಫ್ಲೆಕ್ಟರ್ ಬ್ಯಾಂಡ್ | 285 ಸಂಖ್ಯೆ |
| 18 | ಮೆಗಾಫೋನ್ | 100 ಸಂಖ್ಯೆ |

**ಸೂಚನೆ:** ಮೇಲಿನ ಕಿಟ್ ಸಾಮಗ್ರಿಗಳ ಉತ್ಪಾದಕರು/ಉತ್ಪಾದಕ ಘಟಕ/ಉತ್ಪಾದಕ ಘಟಕದ ಅಧಿಕೃತ ಏಜೆಂಟುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

2. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ನಿರ್ದಿಷ್ಟತೆಯೊಂದಿಗೆ ದಿನಾಂಕ: 1.9.2003 ರಿಂದ 20.9.2003 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ. 200.00 ಆಗಿದ್ದು, ಇದನ್ನು ಮರು ಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯ ಬಯಸುವವರು ರೂ. 200/- ಗಳಿಗೆ ಡಿ.ಡಿ. ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ. 30/- ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ.

3. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

   ಅ) ಮೊಹರು ಮಾಡಿದ **ಒಂದನೇ ಕವರಿನ (ತಾಂತ್ರಿಕ ಬಿಡ್)** ಮೇಲ್ಭಾಗದಲ್ಲಿ "ಕಿಟ್ ಸಾಮಗ್ರಿಗಳ ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಇತರೆ ವಿವರಣೆ" ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

   ಆ) ಮೊಹರು ಮಾಡಿದ **ಎರಡನೇ ಕವರಿನ (ಕಮರ್ಷಿಯಲ್ ಕವರ್/ಬೆಲೆ ಲಕೋಟೆ)** ಮೇಲ್ಭಾಗದಲ್ಲಿ "ಕಿಟ್ ಸಾಮಗ್ರಿಗಳ ಬೆಲೆ ಪಟ್ಟಿ" ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

4. ಮೊದಲನೇ ಕವರ್ (ತಾಂತ್ರಿಕ ಬಿಡ್): ಮೊಹರು ಮಾಡಿದ ಕವರ್ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

   ಅ) ಸರಬರಾಜು ಮಾಡಲು ಇಚ್ಛಿಸುವ ಪ್ರತಿಯೊಂದು ಸಾಮಗ್ರಿಗಳಿಗೆ ಇ.ಎಂ.ಡಿ. ಯ ಬಾಬ್ತು ಪ್ರತ್ಯೇಕವಾಗಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ

ಡಿಮ್ಯಾಂಡ್ ಡ್ರಾಫ್ಟ್‌ಗಳು (ಇ.ಎಂ.ಡಿ. ಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇಕಡ 2 ರಷ್ಟು ಇರಬೇಕು) ಸರಬರಾಜು ಮಾಡುವ ಪ್ರತಿಯೊಂದು ಸಾಮಗ್ರಿಗಳಿಗೆ ಪ್ರತ್ಯೇಕ ಇ.ಎಂ.ಡಿ. ಗಳನ್ನು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ದಾಖಲಾತಿ.

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ.

ಉ) ವಾರ್ಷಿಕ ವಹಿವಾಟು

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಸಾಮಗ್ರಿಗಳ ಪಟ್ಟಿ. ಪಟ್ಟಿಯಲ್ಲಿ ಬೆಲೆಯನ್ನು ನಮೂದಿಸಬಾರದು.

ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

5. **ಎರಡನೇ ಕವರ್ (ಕಮರ್ಷಿಯಲ್ ಕವರ್/ಬೆಲೆ ಪಟ್ಟಿ)** ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.
6. ಸರಬರಾಜು ಮಾಡಲು ಇಚ್ಛಿಸುವ ಪ್ರತಿಯೊಂದು ಸಾಮಗ್ರಿಗಳ ಮಾದರಿಯ 3 ಸಾಮಗ್ರಿಗಳನ್ನು ತಪ್ಪದೆ ದಿನಾಂಕ: 30.9.2003 ಸಂಜೆ 5 ಗಂಟೆ ಒಳಗೆ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು. ತದನಂತರ ಪಡೆಯುವ ಮಾದರಿಗಳನ್ನು ಪರಿಗಣಿಸಲಾಗುವುದಿಲ್ಲ.
7. ಮೊಹರು ಮಾಡಿದ ಎರಡು ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ಎಸ್. ರಾಮಕೃಷ್ಣ, ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರ ಸ್ಥಾನ-1) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು-560001 ರವರ ಹೆಸರಿಗೆ ದಿನಾಂಕ: 30.9.2003 ರ ಸಂಜೆ 5.00 ಗಂಟೆಯೊಳಗೆ ತಲುಪುವಂತೆ ಸಲ್ಲಿಸತಕ್ಕದ್ದು. ತದನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.
8. ಒಂದನೇ ಕವರ್‌ನ್ನು (ತಾಂತ್ರಿಕ ಬಿಡ್) ದಿನಾಂಕ: 1.10.2003 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು/ಪ್ರತಿನಿಧಿಗಳು ಟೆಂಡರ್ ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶವಿರುತ್ತದೆ. ತದನಂತರ ಟೆಂಡರ್ ಆಹ್ವಾನಿಸಿದ ಅಧಿಕಾರಿಯು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು/ದಾಖಲಾತಿಗಳನ್ನು ಪರಿಶೀಲಿಸಿ, ಸರಬರಾಜು ಮಾಡಲು ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲ್ಪಡುವರು.
9. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ. ಕಡಿಮೆ ಬೆಲೆ ಆಯ್ಕೆಯ ಮಾನದಂಡವಾಗಿರುವುದಿಲ್ಲ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್
ಆಫ್ ಪೊಲೀಸ್ ರವರ ಪರವಾಗಿ.

ಪಿ.ಆರ್. 586

**PUBLIC WORKS DEPARTMENT, OFFICE OF THE EXECUTIVE ENGINEER,**
**No. 1, Buildings Division, Bangalore**
**TENDER NOTIFICATION**
**(TWO COVER SYSTEM)**
**No. EE/Bld-1/TS-1/VSSB/TND/2003-04/84, DATED: 23rd August 2003**

The Government of Karnataka Public Works Department Proposes to take up the work of Arranging Power supply to an extent of 750 KVA to Vidhana Soudha - South Block by running express feeder from "A" Station MUSS @ Anandarao Circle to proposed RMU near Vth stage, M.S. Building, Bangalore. The estimated cost of the project is about Rs. 99.00 lakhs.

Sealed tenders in duplicate in two covers **comprising of cover-I Technical bid and cover-II financial bid** are invited from the registered KPWD / CPWD / MES contractors / Reputed Firms / Companies for the work noted below and will be received by the undersigned in this office upto 4.00 p.m. (IST) on the date noted in Col.No.10 subject to the conditions laid down in form No. PWG 65, KPWD code. Vol.II and Karnataka Transparency in Public Procurement Act-2003. The Technical bid (Cover-I) will be opened by the undersigned at his office at 4.30 p.m. on the same day if possible, otherwise, on the next working day.

The tender documents can be obtained from this office on application and payment noted in Col. No. 5 (not refundable) in the form of D.D. drawn in favour of the Executive Engineer, No. 1, Buildings Division, PWD, Bangalore. The tender documents will be issued subject to the conditions there of to the intending contractors on the day noted in Col. No. 9 between 10.00 a.m. to 5.30 p.m. (Except 1.30 to 2.15 p.m).

| Sl. No. | Name of work | Approxi amount put to tender in Rs. | E.M.D in Rs. | Cost of Tender doc-ments in Rs. | Class of Contr-actors eligible | Time of Comple tion of work | Last Date of | | | |
|---|---|---|---|---|---|---|---|---|---|---|
| | | | | | | | Receipt of appli-cation | issue of tender schedule | Receipt of sealed tender | No. of calls |
| 1 | Work of Arranging Power supply to an extent of 750 KVA to Vidhana Soudha -South Block by running express feeder from "A" Station MUSS @ Anandarao Circle to proposed RMU near Vth stage, M.S. Building, Bangalore. | 92.00 lakhs | 92000 | 3000+ 12% Taxes | Class I/ KPWD Regist-ered Contra-ctors/ Firms and Compa-nies | 3 months including rainy season | 20.9.03 | 24.9.03 | 30.9.03 | Ist |

**Conditions:**

1. Contractors are requested to submit the following documents in duplicate in the first cover inscribing the cover as **"Cover-I - Technical Bid"** without fail at the time of submission of tender.
    a. Experience and past performance in the execution of similar nature of work.
    The eligibility of the contractor is based on the following criteria.
        i. Should have successfully completed the work of arranging 11 KV Power Supply by providing RMU (Ring Main Unit) in the past five years (i.e. 1998-1999 to 2002-2003). A certificate from the competent authority not below the rank of Executive Engineer shall be enclosed to that effect.
        ii. Should have completed a single similar project costing not less than Rs. 50.00 lakhs in a time span of one year during the past five years.
        iii. The applicant should have achieved a minimum annual financial turn over of atleast **Rs. 100 lakhs** in any three years out of the past five years i.e., 1998-1999 to 2002-2003.
    b. Capabilities with respect to personnel, equipment and construction or manufacturing facilities.
    c. Financial Status and Capacity supported by
        i. Solvency Certificate issued by any Schedule/Nationalised Banks for a sum of **Rs. 50.00 lakhs.**
        ii. Certificate towards availability of Credit/Overdraft facility from any Schedule/ Nationalised Banks for a sum of **Rs. 50.00 lakhs** during the tenure of this contract.
        iii. Affidavit on stamp paper of Rs. 100.00 duly sworn to and executed.
    d. Details of Technical staff and their experience.
    e. The E.M.D. should be paid in the form of DD/FDR and shall be drawn in favour of the Executive Engineer, No. 1, Buildings Division, Bangalore and enclosed to the technical bid. The tenders without E.M.D. are liable for rejection. The minimum validity period of DD/FDR shall be for 180 days.
2. Contractors are requested to submit the price quoted in schedule 'B' in duplicate in second cover inscribing on the cover as **"Cover-II-Financial Bid".**
3. The right of acceptance or rejection of the tenders rests with undersigned without assigning any reasons.
4. Any conditional tenders are liable for rejection without assigning any reasons.
5. The tenderers should produce their registration certificate / latest IT clearance while submitting applications requesting for issue of tender documents and also work done certificate from the competent authority.
6. No materials will be supplied departmentally. The contractor has to make their own arrangements for procurement of all required materials.
7. The terms and conditions laid down as per Karnataka Transparency in Public Procurement Act-2003 and subsequent amendments there in are applicable.
8. Financial Bid (Cover-II) will be opened only if the contractor qualifies the conditions in Technical bid (cover-I) on a date to be intimated later.

**N.G. Gowdaiah**
Executive Engineer
No. 1, Buildings Division, KPWD,
SJP Campus, Sheshadri Road, Bangalore.

PR-587

**KARNATAKA LAND ARMY CORPORATION LIMITED,**
**CHINNASWAMY STADIUM, RAJ BHAVAN ROAD, BANGALORE-560 001**
**(A Govt. of Karnataka Undertaking)**
**TENDER NOTIFICATION**
**No: KLAC/WKS/WS/STEEL/SECT/2003-04/50, Dated: 27th August 2003**

As per Transparency Act, applications are invited for the supply of MS Steel sections like angles, flats, rods from the manufacturers only for KLAC projects at Chitradurga and H. Hadagali in Karnataka. The tender forms can be obtained from the above address by paying Rs. 5,000/- (Rupees Five Thousand only) in the form of Demand Draft in favour of Managing Director, KLAC, Bangalore (Non-Refundable)

The approximate quantity of MS Steel sections required is 900 M.T.
Approximate Amount put to tender is Rs. 160.00 Lakhs.
EMD amount Rs. 1.60 Lakhs
Issue of tender form 1-9-2003 to 26-9-2003
Receipt of completed tender 29-9-2003 Up to 4.00 PM
Opening of Tender 29-9-2003 @ 4.30 PM

**For further details please contact KLAC Hqrs., Bangalore Ph: 2861976/2860838(fax)**

1. Tender shall be submitted in original in prescribed form obtained from this office only.
2. EMD as shown in the tender schedule shall be remitted in the form of Demand Draft drawn in favour of Managing Director, KLAC, Bangalore payable at Bangalore.
3. The rates quoted for Supply of M.S. Steel section shall be valid for six months from the date of acceptance.
4. An attested copy of valid IS certificate shall be enclosed along with the tender.

Receipt of Tender 29-9-2003 at 4.00 P.M. and will opened on the 29-9-2003 at 4.30 P.M.. Further details can be obtained from the office, on any working day. If the KLAC office happened to closed on the date of receipt of tender, the tender will be opened on the next working day at the same time mentioned above. Tenderer or his representatives may be present at the time of opening.

Joint Director (w),
for Managing Director.

PD-68

**ಲೋಕೋಪಯೋಗಿ ಇಲಾಖೆ**
**(ರಾಷ್ಟ್ರೀಯ ಹೆದ್ದಾರಿ)**
**ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಅಶೋಕ ನಗರ,**
**ಮಂಗಳೂರು-575006. ದೂ.ಸಂ. 2450415**
**ಟೆಂಡರ್ ಅಧಿಸೂಚನೆ**
**(ಎರಡು ಲಕೋಟೆ ಪದ್ಧತಿಯಲ್ಲಿ)**
**ಕ್ರ.ಸಂ: ರಾಹೆವಿ:ಮಂ:ಎಇ-2: ಐ.ಆರ್.ಕ್ಯೂ.ಪಿ.: ಎನ್.ಐ.ಟಿ:2003-04: 2060, ದಿನಾಂಕ: 4ನೇ ಜುಲೈ 2003**

ಮೊಹರು ಮಾಡಿದ ಲಕೋಟೆಗಳಲ್ಲಿ "ಐಟಂವಾರು" ಟೆಂಡರುಗಳನ್ನು ಈ ಕೆಳಗಿನ ತಃಖ್ತೆಯಲ್ಲಿ ನಮೂದಿಸಲಾದ ಕಾಮಗಾರಿಗಳಿಗೆ "ಎರಡು ಲಕೋಟೆ ಪದ್ಧತಿಯಲ್ಲಿ" ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಹಾಗೂ ಆಕ್ಟ್ 2000ದ ಪ್ರಕಾರ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿಯಾದ 1ನೇ ದರ್ಜೆ ಗುತ್ತಿಗೆದಾರರಿಂದ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಎರಡು ಲಕೋಟೆ ಟೆಂಡರ್‌ನ್ನು "ತಾಂತ್ರಿಕ ಬಿಡ್" (ಟೆಕ್ನಿಕಲ್ ಬಿಡ್) ಮತ್ತು "ಹಣಕಾಸಿನ ಬಿಡ್" (ಫೈನಾನ್ಷಿಯಲ್ ಬಿಡ್) ಎಂದು ಪರಿಗಣಿಸಲಾಗಿದೆ. ತಾಂತ್ರಿಕ ಬಿಡ್ ಮತ್ತು ಹಣಕಾಸಿನ ಬಿಡ್‌ನ್ನು ಪ್ರತ್ಯೇಕವಾಗಿ ಮೊಹರು ಮಾಡಿ, ಕಾಮಗಾರಿಯ ವಿವರ, ಗುತ್ತಿಗೆದಾರರ ಪೂರ್ಣ ವಿಳಾಸದ ವಿವರ ದಾಖಲಿಸಿ, ಎರಡನ್ನೂ ಒಂದೇ ಲಕೋಟೆಯಲ್ಲಿ ಹಾಕಿ ಮೊಹರು ಮಾಡಿ ಅಧೀಕ್ಷಕ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವೃತ್ತ, ಕೆ.ಆರ್. ವೃತ್ತ, ಬೆಂಗಳೂರು ಇಲ್ಲಿ ಅಥವಾ ಕಾರ್ಯಕಾರಿ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಉರ್ವಸ್ಟೋರ್, ಮಂಗಳೂರು ಇಲ್ಲಿ ದಿನಾಂಕ: 22.9.2003 ರ ಅಪರಾಹ್ನ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು ಮತ್ತು ಕರ್ನಾಟಕ ಪಬ್ಲಿಕ್ ವರ್ಕ್ಸ್ ಡಿ ಕೋಡ್ ವಾ. 2 ಪಿ.ಡಬ್ಲ್ಯೂ.ಜಿ. 65 ಮತ್ತು 66 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಹಾಗೂ ಆಕ್ಟ್ 2000ದ ಪ್ರಕಾರ ನಿಯಮಗಳನ್ನು ಪಾಲಿಸಲಾಗುವುದು. ತಾಂತ್ರಿಕ ಬಿಡ್‌ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ತೆರೆಯಲಾಗುವುದು ಹಾಗೂ ಸದರಿ ದಿನಾಂಕವು ಆಕಸ್ಮಿಕವಾಗಿ ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ, ತದನಂತರದ ದಿನಾಂಕವನ್ನು ಟೆಂಡರ್ ತೆರೆಯಲು ಪರಿಗಣಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ತೇರ್ಗಡೆಯಾದ ಗುತ್ತಿಗೆದಾರರ ಹಣಕಾಸಿನ ಬಿಡ್‌ನ್ನು ಮಾತ್ರ ಮುಂದೆ ತಿಳಿಸಲಿರುವ ದಿನಾಂಕದಂದು ತೆರೆಯಲಾಗುವುದು.

**ಇದು ಮೊದಲನೇ ಕರೆ**

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡ ರಿಗಿಟ್ಟಿರುವ ಮೊತ್ತ ರೂ. ಗಳಲ್ಲಿ | ಇ.ಎಂ.ಡಿ. ಮೊತ್ತ ರೂ. ಗಳಲ್ಲಿ | ಟೆಂಡರ್ ದಾಖಲೆಗಳ ಮೌಲ್ಯ ರೂ.ಗಳಲ್ಲಿ ಹಿಂದಿರುಗಿಸ ಲಾಗುವುದಿಲ್ಲ (ತೆರಿಗೆಗಳು ಸೇರಿ) | ಕೆಲಸದ ಮಾದರಿ | ಕೆಲಸ ಮುಗಿಸುವ ಕಾಲಾವಧಿ (ಮಳೆಗಾಲ ಹೊರತು ಪಡಿಸಿ) |
|---|---|---|---|---|---|---|
| 1 | 2 | 3 | 4 | 5 | 6 | 7 |

| 1 | 2 | 3 | 4 | 5 | 6 | 7 |
|---|---|---|---|---|---|---|
| 1 | ರಾ.ಹೆ. 48ರ ಬೆಂಗಳೂರು-ಮಂಗಳೂರು ರಸ್ತೆ ಕಿ.ಮೀ. 154.00 ರಿಂದ 165.00 ರವರೆಗೆ ರಸ್ತೆ ಗುಣಮಟ್ಟ ಅಭಿವೃದ್ಧಿಪಡಿಸುವ ಕಾಮಗಾರಿ | 1,79,84,000 | 1,79,900 | 20,000 | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ | 4 ತಿಂಗಳು |
| 2 | ರಾ.ಹೆ. 48ರ ಬೆಂಗಳೂರು-ಮಂಗಳೂರು ರಸ್ತೆ ಕಿ.ಮೀ. 165.00 ರಿಂದ 180.00 ರವರೆಗೆ ರಸ್ತೆ ಗುಣಮಟ್ಟ ಅಭಿವೃದ್ಧಿಪಡಿಸುವ ಕಾಮಗಾರಿ | 2,39,11,000 | 2,39,200 | 20,000 | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ | 4 ತಿಂಗಳು |
| 3 | ರಾ.ಹೆ. 48ರ ಬೆಂಗಳೂರು-ಮಂಗಳೂರು ರಸ್ತೆ ಕಿ.ಮೀ. 247.00 ರಿಂದ 259.00 ರವರೆಗೆ ರಸ್ತೆ ಗುಣಮಟ್ಟ ಅಭಿವೃದ್ಧಿಪಡಿಸುವ ಕಾಮಗಾರಿ | 2,04,02,000 | 2,04,100 | 20,000 | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ | 4 ತಿಂಗಳು |
| 4 | ರಾ.ಹೆ. 48ರ ಬೆಂಗಳೂರು-ಮಂಗಳೂರು ರಸ್ತೆ ಕಿ.ಮೀ. 270.00 ರಿಂದ 280.00 ರವರೆಗೆ ರಸ್ತೆ ಗುಣಮಟ್ಟ ಅಭಿವೃದ್ಧಿಪಡಿಸುವ ಕಾಮಗಾರಿ | 1,77,19,000 | 1,77,200 | 20,000 | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ | 4 ತಿಂಗಳು |
| 5 | ರಾ.ಹೆ. 13ರ ಶೋಲಾಪುರ-ಮಂಗಳೂರು ರಸ್ತೆ ಕಿ.ಮೀ. 682.00 ರಿಂದ 690.00 ರವರೆಗೆ ರಸ್ತೆ ಗುಣಮಟ್ಟ ಅಭಿವೃದ್ಧಿಪಡಿಸುವ ಕಾಮಗಾರಿ | 94,56,000 | 94,600 | 10,000 | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ | 4 ತಿಂಗಳು |
| 6 | ರಾ.ಹೆ. 206ರ ತುಮಕೂರು-ಹೊನ್ನಾವರ ರಸ್ತೆ ಕಿ.ಮೀ. 131.00 ರಿಂದ 140.00 ರವರೆಗೆ ರಸ್ತೆ ಅಗಲಗೊಳಿಸುವುದು ಹಾಗೂ ಬಲಪಡಿಸುವುದು. | 2,58,03,000 | 2,58,100 | 20,000 | ಡಬ್ಲ್ಯೂ ಬಿ.ಎಂ., ಬಿ.ಎಂ. ಮತ್ತು ಎಸ್.ಡಿ.ಬಿ.ಸಿ | 8 ತಿಂಗಳು |

**ಷರತ್ತುಗಳು**

1. ತಾಂತ್ರಿಕ ಬಿಡ್ (ಟೆಕ್ನಿಕಲ್ ಬಿಡ್) ನಲ್ಲಿರಬೇಕಾದ ಅವಶ್ಯಕತೆಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ. ಪ್ರತಿಯೊಬ್ಬ ಅರ್ಜಿದಾರ ಗುತ್ತಿಗೆದಾರನೂ ಈ ಕೆಳಗೆ ವಿವರಿಸಿದ **ಯಂತ್ರೋಪಕರಣಗಳನ್ನು ಸ್ವಂತವಾಗಿ** ಹೊಂದಿದ್ದು ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಲಗತ್ತಿಸತಕ್ಕದ್ದು.

| ಕ್ರ.ಸಂ. | ಯಂತ್ರೋಪಕರಣಗಳು | ಸಂಖ್ಯೆ | ಲಗತ್ತಿಸಬೇಕಾದ ದಾಖಲೆಗಳ ವಿವರ |
|---|---|---|---|
| i | '40 ರಿಂದ 60 ಕ್ಕಿಂತ ಹೆಚ್ಚಿನ ಟಿ.ಪಿ.ಎಚ್. ಕೆಪಾಸಿಟಿಯ ಹಾಟ್ ಮಿಕ್ಸ್ ಪ್ಲಾಂಟ್' (ಎಂ.ಒ.ಆರ್.ಟಿ ಅಂಡ್ ಹೆಚ್ ಯವರ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | 1 | ಸ್ವಂತಕ್ಕೆ ಖರೀದಿಸಿದ ಇನ್‌ವಾಯ್ಸ್/ಖರೀದಿ ಕರಾರು ಪತ್ರ ಮೂಲ ಇನ್‌ವಾಯ್ಸ್‌ನ ದೃಢೀಕೃತ ನಕಲಿನೊಂದಿಗೆ (ಮಾರಾಟ ಮಾಡಿದವನಿಂದ) |
| ii | ಪೇವರ್ ಫಿನಿಶರ್ | 1 | -ಅದೇ- |
| iii | ಮೆಕ್ಯಾನಿಕಲ್ ಸ್ಪ್ರೇಯರ್ | 2 | -ಅದೇ- |
| iv | ವೈಬ್ರೇಟರಿ ರೋಡ್ ರೋಲರ್ | 1 | -ಅದೇ- |
| v | ಸ್ಟ್ಯಾಟಿಕ್ ರೋಡ್ ರೋಲರ್ | 2 | -ಅದೇ- |
| vi | ಎಕ್ಸ್‌ಕವೇಟರ್ | 1 | -ಅದೇ- ಕ್ರಮ ಸಂಖ್ಯೆ (6)ರ ಕೆಲಸಕ್ಕೆ ಮಾತ್ರ |
| vii | ಟಿಪ್ಪರ್ | 4 | ಸಾರಿಗೆ ಕಛೇರಿಯ ರಿಜಿಸ್ಟ್ರೇಷನ್ ಸರ್ಟಿಫಿಕೇಟ್‌ನ ದೃಢೀಕೃತ ಯಥಾ ನಕಲು |

2. ಆಸಕ್ತಿಯುಳ್ಳ ಅರ್ಹ ಗುತ್ತಿಗೆದಾರರು, ತಮ್ಮ ಅರ್ಜಿಯನ್ನು ಕಾಂಟ್ರಾಕ್ಟ್ ರಿಜಿಸ್ಟ್ರೇಷನ್‌ನ ಯಥಾ ನಕಲು, ಮಾರಾಟ ತೆರಿಗೆ ಸಂದಾಯದ ಯಥಾ ನಕಲನ್ನು ದೃಢೀಕರಿಸಿ, ನಿಗದಿತ ಹಣವನ್ನು ಕಾರ್ಯಕಾರಿ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇಲ್ಲಿ ನಗದಾಗಿ ಅಥವಾ ಡಿಮಾಂಡ್ ಡ್ರಾಫ್ಟ್ ಮುಖಾಂತರ ನೀಡಿದಲ್ಲಿ ಸ್ವೀಕರಿಸಲಾಗುವುದು. ಮೇಲಿನ ಅಡಕಗಳಿಲ್ಲದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲ.
3. ತಃಖ್ತೆಯ ಕಲಂ (6) ರಲ್ಲಿ ನಮೂದಿಸಿರುವ ಮಾದರಿಯ ರಸ್ತೆ ಕಾಮಗಾರಿಗಳನ್ನು ಅರ್ಜಿದಾರ ಗುತ್ತಿಗೆದಾರನು ಟೆಂಡರಿಗಿಟ್ಟ ಮೊಬಲಗಿನ ಶೇಕಡಾ 30ರ ಮೊತ್ತಕ್ಕೆ (ವಾರ್ಷಿಕ ಶೇ. 10ರ ಹೆಚ್ಚುವರಿಯಂತೆ) ಹಿಂದಿನ 5 ವರ್ಷಗಳ ಯಾವುದಾದರೂ ಒಂದು ಆರ್ಥಿಕ ಸಾಲಿನಲ್ಲಿ ಮಾಡಿರತಕ್ಕದ್ದು. ಅಥವಾ ಗುತ್ತಿಗೆದಾರರು ಇದೇ ಮಾದರಿಯ ಕೆಲಸಗಳನ್ನು ಹಾಲೀ ಆರ್ಥಿಕ ವರ್ಷದಲ್ಲಿ ಕನಿಷ್ಠ ಶೇ. 30ರ ಮೊತ್ತದಷ್ಟನ್ನು ಪೂರ್ಣಗೊಳಿಸಿರಬೇಕು. ಇದನ್ನು ತಾಂತ್ರಿಕ ಬಿಡ್‌ನಲ್ಲಿ ದಾಖಲಿಸತಕ್ಕದ್ದು.
4. ತಃಖ್ತೆಯಲ್ಲಿ ನಮೂದಿಸಿರುವ ಕಾಮಗಾರಿಗೆ, ಶೇಕಡಾ 50 ರಷ್ಟು ಪ್ರಮಾಣದ ಮೊತ್ತಕ್ಕೆ ಹಣಕಾಸಿನ ವ್ಯವಸ್ಥೆಯನ್ನು ಯಾವುದಾದರೂ ಶೆಡ್ಯೂಲ್ ಬ್ಯಾಂಕಿನಿಂದ "ಲೈನ್ ಆಫ್ ಕ್ರೆಡಿಟ್" ಪಡೆದು ತಾಂತ್ರಿಕ ಬಿಡ್‌ನಲ್ಲಿ ದೃಢೀಕರಿಸಿ ಲಗತ್ತಿಸತಕ್ಕದ್ದು, ಲಗತ್ತಿಸದಿದ್ದಲ್ಲಿ, ಟೆಂಡರ್‌ನ್ನು ಸ್ವೀಕರಿಸಲಾಗುವುದಿಲ್ಲ.
5. ತಃಖ್ತೆಯಲ್ಲಿ ನಮೂದಿಸಿದ ಇ.ಎಂ.ಡಿ. ಯನ್ನು ರಾಷ್ಟ್ರೀಕೃತ ಅಥವಾ ಶೆಡ್ಯೂಲ್ ಬ್ಯಾಂಕಿನಿಂದ ಡಿಡಿ/ಬ್ಯಾಂಕರ್ಸ್ ಚೆಕ್/ಎಫ್‌ಡಿಆರ್/ಬ್ಯಾಂಕ್ ಗ್ಯಾರಂಟಿ/ಎನ್‌ಎಸ್‌ಸಿ (ಕಾರ್ಯಕಾರಿ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇವರ ಹೆಸರಿಗೆ ಸಂಬಂಧಪಟ್ಟ ಅಂಚೆ ಕಛೇರಿಯಿಂದ ವರ್ಗಾಯಿಸಿ) ಮೂಲಕ ಪಡೆದು ತಾಂತ್ರಿಕ ಬಿಡ್‌ನೊಂದಿಗೆ ಇಡತಕ್ಕದ್ದು. ಬ್ಯಾಂಕ್ ಗ್ಯಾರಂಟಿಯನ್ನು ಪಿಡಬ್ಲ್ಯೂಜಿ 66 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲೇ ಲಗತ್ತಿಸತಕ್ಕದ್ದು. ಪಿಡಬ್ಲ್ಯೂಜಿ 66 ರಲ್ಲಿ ನಮೂದಿಸಿದ ಅವಧಿಗೆ ಇ.ಎಂ.ಡಿ. ಯನ್ನು ನೀಡತಕ್ಕದ್ದು. ಮೇಲಿನ ಷರತ್ತುಗಳಿಗನುಗುಣವಾಗಿ ಇ.ಎಂ.ಡಿ.ಯು ಇಲ್ಲವಾದಲ್ಲಿ ಅಂತಹ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
6. ನಿಗದಿಪಡಿಸಿದ ದಿನಾಂಕಗಳು:

| | | |
|---|---|---|
| ಅ | ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ | 18.8.2003 (ಕಛೇರಿ ಕೆಲಸದ ಅವಧಿಯಲ್ಲಿ) |
| ಆ | ಖಾಲಿ ಟೆಂಡರು ಶೆಡ್ಯೂಲ್‌ಗಳನ್ನು ವಿತರಿಸುವ ದಿನಾಂಕ | 12.9.2003 (ಕಛೇರಿ ಕೆಲಸದ ಅವಧಿಯಲ್ಲಿ) |
| ಇ | ಭರ್ತಿ ಮಾಡಿದ ಟೆಂಡರನ್ನು ಸ್ವೀಕರಿಸುವ ಕೊನೆಯ ದಿನಾಂಕ (ತಾಂತ್ರಿಕ ಹಾಗೂ ಆರ್ಥಿಕ ಬಿಡ್) | 22.9.2003 (ಸಂಜೆ 4.00 ಘಂಟೆಯವರೆಗೆ) |
| ಈ | ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ | 22.9.2003 (ಸಂಜೆ 4.30 ಘಂಟೆ) (ಸಾಧ್ಯವಾದಲ್ಲಿ) |

7. ಲಗತ್ತಿಸಿರುವ ಎಲ್ಲಾ ದಾಖಲೆಗಳನ್ನು ಜಿಲ್ಲಾಮಟ್ಟದ ಅಧಿಕಾರಿಯವರಿಂದ ದೃಢೀಕರಿಸಿರಬೇಕು. ಮೂಲ ದಾಖಲೆಗಳನ್ನು ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕದಂದು ತಪ್ಪದೇ ಪರಿಶೀಲನೆಗಾಗಿ ಹಾಜರುಪಡಿಸತಕ್ಕದ್ದು ತಪ್ಪಿದಲ್ಲಿ ಟೆಂಡರನ್ನು ಅಂಗೀಕರಿಸಲಾಗುವುದಿಲ್ಲ.
8. ತಾಂತ್ರಿಕ ಬಿಡ್‌ನಲ್ಲಿ ತೇರ್ಗಡೆಯಾದ ಗುತ್ತಿಗೆದಾರರ, ಫೈನಾನ್ಷಿಯಲ್ ಬಿಡ್ಡನ್ನು ಮುಂದೆ ತಿಳಿಸಲಾಗುವ ದಿನಾಂಕ ಹಾಗೂ ಸಮಯದಲ್ಲಿ ಕಾರ್ಯಕಾರಿ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇಲ್ಲಿ ತೆರೆಯಲಾಗುವುದು.
9. ಕೇವಲ ಅಗತ್ಯವಿರುವ ಸಂಬಂಧಪಟ್ಟ ದಾಖಲೆಗಳನ್ನು ಮಾತ್ರ ತಾಂತ್ರಿಕ ಬಿಡ್‌ನಲ್ಲಿ ಒದಗಿಸಬೇಕು. ಕಂಪೆನಿಯ ಇತರೆ ಅನಗತ್ಯ ವಿವರಗಳನ್ನು ಲಗತ್ತಿಸದಿರಲು ಸೂಚಿಸಿದೆ.
10. ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ನ್ನು ತಿರಸ್ಕರಿಸುವ ಹಕ್ಕನ್ನು ಸಂಬಂಧಪಟ್ಟ ಅಧಿಕಾರಿಯು ಕಾಯ್ದಿರಿಸಿಕೊಂಡಿರುತ್ತಾರೆ.
11. ಜಾಯಿಂಟ್ ವೆಂಚರ್ ಅನ್ವಯಿಸುವುದಿಲ್ಲ.

ಹೆಚ್ಚಿನ ವಿವರಗಳು ಬೇಕಾಗಿದ್ದಲ್ಲಿ ಕಛೇರಿಯ ಕೆಲಸದ ಅವಧಿಯಲ್ಲಿ ಸಂಬಂಧಪಟ್ಟವರನ್ನು ಸಂಪರ್ಕಿಸಿ ಪಡೆದುಕೊಳ್ಳಬಹುದು.

ಎಕ್ಸಿಕ್ಯೂಟಿವ್ ಇಂಜಿನಿಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು.

ಪಿ.ಆರ್. 588

**ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಕಛೇರಿ, ವಿಜಾಪೂರ ಜಿಲ್ಲೆ**

**ಬಹಿರಂಗ ಹರಾಜು ಪ್ರಕಟಣೆ**

**ನಂ: ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:220:2002-03, 357:2002-03, 3) ಇಎಕ್ಸ್‌ಇ:ಸಿಆರ್‌ಎಂ: 67:2001-02, ಇಎಕ್ಸ್‌ಇ:ಡಿಟಿಸಿಆರ್: 290:2002-03, ದಿನಾಂಕ: 28ನೇ ಆಗಸ್ಟ್ 2003**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1) ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು, ವಿಜಾಪೂರ ಇವರ ಆದೇಶ ನಂ: ಇಎಕ್ಸ್‌ಇ: ಸಿಆರ್‌ಎಂ: 67: 2001-02, ದಿನಾಂಕ: 24.7.2003.

2) ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಇವರ ಆದೇಶದ ನಂ: ಇಎಕ್ಸ್‌ಇ: ಡಿಟಿಸಿಆರ್: 290: 2002-03, ದಿನಾಂಕ: 24.7.2003.

3) ಇಎಕ್ಸ್‌ಇ: ಡಿಟಿಸಿಆರ್: 357:2002-03, ದಿನಾಂಕ: 11.8.2003.

4) ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಇವರ ಆದೇಶ ನಂ: ಇಎಕ್ಸ್‌ಇ: ಸಿಆರ್‌ಎಂ: ಡಿಟಿಸಿಆರ್: 220:2002-03, ದಿನಾಂಕ: 6.1.2003.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಉಲ್ಲೇಖದಲ್ಲಿ ನಮೂದಿಸಿದ ಆದೇಶಗಳಲ್ಲಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು ಇದೆ. ಈ ಕೆಳಕಂಡ ವಾಹನಗಳನ್ನು ಈ ಕೆಳಗೆ ತಿಳಿಸಿರುವ ಸ್ಥಳ ಮತ್ತು ದಿನಾಂಕದಂದು ಅಲ್ಲಿ ಹೇಗಿದೆಯೋ ಹಾಗೆ ಪ್ರಕಟಣೆಯ ಷರತ್ತುಗಳಿಗೆ ಒಳಪಟ್ಟು ಬಹಿರಂಗ ಹರಾಜು ಮೂಲಕ ಅಬಕಾರಿ ಉಪ ಅಧೀಕ್ಷಕರು ವಿಜಾಪೂರ ಉಪವಿಭಾಗ ಮತ್ತು ಹರಾಜು ನಿರ್ವಾಹಣಾಧಿಕಾರಿಗಳು ವಿಜಾಪೂರ ಇವರ ಸಮ್ಮುಖದಲ್ಲಿ ವಿಲೇವಾರಿ ಮಾಡಲಾಗುವುದು.

| ಅ.ನಂ. | ವಾಹನ ಇರುವ ಸ್ಥಳ | ಹರಾಜಿನ ದಿನಾಂಕ ಸಮಯ ಮತ್ತು ಸ್ಥಳ | ವಾಹನದ ವಿವರ ಮತ್ತು ಸಂಖ್ಯೆ |
|---|---|---|---|
| 1 | ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ಗ್ರಾಮೀಣ ಉಪವಲಯ | ದಿ: 22.9.2003 ಬೆಳಿಗ್ಗೆ 11.00 ಗಂಟೆಗೆ ಅಬಕಾರಿ ನಿರೀಕ್ಷಕರ ಕಛೇರಿ ವಿಜಾಪೂರ ವಲಯ | ಎಂ: 80: ಮೊಪೆಡ್ ನಂ: ಎಂಎಜಡ್ 6838 |
| 2 | ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ನಗರ ಉಪವಲಯ | ದಿ: 22.9.2003 ಬೆಳಿಗ್ಗೆ 11.00 ಗಂಟೆಗೆ ಅಬಕಾರಿ ನಿರೀಕ್ಷಕರ ಕಛೇರಿ ವಿಜಾಪೂರ ವಲಯ | ಲೂನಾ ಟಿಎಫ್‌ಆರ್ ನಂ: ಎಂಇಐ: 8970 |
| 3 | ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ನಗರ ಉಪವಲಯ | ದಿ: 22.9.2003 ಬೆಳಿಗ್ಗೆ 11.00 ಗಂಟೆಗೆ ಅಬಕಾರಿ ನಿರೀಕ್ಷಕರ ಕಛೇರಿ ವಿಜಾಪೂರ ವಲಯ | ಮಿನಿ ಲಾರಿ (ಗೂಡ್ಸ್ ವಾಹನ) ನಂ: ಕೆಎ: 25: 7632 |
| 4 | ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ನಗರ ಉಪವಲಯ | ದಿ: 22.9.2003 ಬೆಳಿಗ್ಗೆ 11.00 ಗಂಟೆಗೆ ಅಬಕಾರಿ ನಿರೀಕ್ಷಕರ ಕಛೇರಿ ವಿಜಾಪೂರ ವಲಯ | ಟಿವಿಎಸ್: 50: ಸಿಎನ್‌ಜೆ: 2795 (ಮೊಪೆಡ್) |

**ಷರತ್ತುಗಳು**

1. ಹರಾಜಿನಲ್ಲಿ ಯಾರು ಬೇಕಾದರೂ ಭಾಗವಹಿಸಬಹುದು (ಇಲಾಖಾ ಸಿಬ್ಬಂದಿ ಹೊರತುಪಡಿಸಿ)
2. ಹರಾಜಿನಲ್ಲಿ ಭಾಗವಹಿಸುವವರು ಮುಂಗಡ ಠೇವಣಿಯನ್ನು ದಿನಾಂಕ: 22.9.2003 ರಂದು ಬೆಳಿಗ್ಗೆ 9.00 ರಿಂದ 11.00 ಗಂಟೆಯವರೆಗೆ ಹರಾಜು ಮಾಡುವ ಸ್ಥಳದಲ್ಲಿ ಠೇವಣಿ ಇಟ್ಟು ರಶೀದಿಯನ್ನು ಪಡೆಯತಕ್ಕದ್ದು.
3. ಹರಾಜಿನಲ್ಲಿ ಭಾಗವಹಿಸುವವರು ರೂ. 500.00 ಮಾತ್ರ ಮುಂಗಡ ಠೇವಣಿ ಇಡತಕ್ಕದ್ದು. ಮತ್ತು ಮಿನಿ ಲಾರಿಗೆ ರೂ. 5,000.00 ಮಾತ್ರ ಮುಂಗಡ ಠೇವಣಿ ಇಡತಕ್ಕದ್ದು.
4. ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಸವಾಲುದಾರರು ವಾಹನವನ್ನು ತಮ್ಮ ಸ್ವಂತ ಬಾಬಿನಲ್ಲಿ ತೆಗೆದುಕೊಂಡು ಹೋಗತಕ್ಕದ್ದು. ಮತ್ತು ಅವರ ಸ್ವಂತ ಖರ್ಚಿನಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಿಜಾಪೂರ ಜಿಲ್ಲೆ ಇವರಲ್ಲಿ ನೋಂದಣಿ ಮಾಡಿಸಿಕೊಳ್ಳತಕ್ಕದ್ದು.
5. ಯಶಸ್ವಿ ಸವಾಲುದಾರರು ವಾಹನಕ್ಕೆ ತಗುಲುವ ಮಾರಾಟ ತೆರಿಗೆ ಮತ್ತು ಇತರೆ ತೆರಿಗೆಗಳನ್ನು ಸಂದಾಯ ಮಾಡತಕ್ಕದ್ದು.
6. ಯಶಸ್ವಿ ಸವಾಲುದಾರರು ತಾವು ನೀಡಿದ ಹೆಚ್ಚಿನ ಸವಾಲಿನ ಪ್ರತಿಶತ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಪಾವತಿ ಮಾಡಿ ರಶೀದಿ ಪಡೆಯತಕ್ಕದ್ದು ಹಾಗೂ ಉಳಿದ ಹಣವನ್ನು ಸ್ಥಿರೀಕರಣ ಆದೇಶದ ನಂತರ ಸಂದಾಯಿಸಿ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು.
7. ಹರಾಜು ನಿರ್ವಾಹಣಾಧಿಕಾರಿಯ ತೀರ್ಮಾನವೇ ಎಲ್ಲ ರೀತಿಯಲ್ಲೂ ಅಂತಿಮವಾಗಿದ್ದು ಜಿಲ್ಲಾ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ ಜಿಲ್ಲೆ ಇವರ ಸ್ಥಿರೀಕರಣ ಆದೇಶಕ್ಕೆ ಒಳಪಟ್ಟಿರುತ್ತದೆ.
8. ಯಶಸ್ವಿ ಸವಾಲುದಾರರು ಸ್ಥಿರೀಕರಣ ಆದೇಶ ನೀಡಿದ (15) ದಿನಗಳ ಒಳಗಾಗಿ ವಾಹನವನ್ನು ತಮ್ಮ ಸುಪರ್ಧಿಗೆ ಪಡೆಯತಕ್ಕದ್ದು. ತಪ್ಪಿದಲ್ಲಿ ನೀಡಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
9. ಹರಾಜಿನಲ್ಲಿ ಭಾಗವಹಿಸುವ ಮುನ್ನ ಕಾಲಂ ನಂ: 1 ರಲ್ಲಿ ತೋರಿಸಿದ ಸ್ಥಳದಲ್ಲಿ ವಾಹನ ಇರುತ್ತದೆ. ಆದುದರಿಂದ ಸದರಿ ವಾಹನಗಳನ್ನು ಕಛೇರಿಯ ಕೆಲಸದ ದಿನಗಳಂದು ಸಂಪೂರ್ಣ ಪರಿಶೀಲಿಸಿ ತೃಪ್ತಿಕರವಾಗಿದ್ದಲ್ಲಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು.
10. ಯಶಸ್ವಿ ಅಲ್ಲದ ಸವಾಲುದಾರರ ಠೇವಣಿ ಹಣವನ್ನು ಅದೇ ದಿನ ಹಿಂದಿರುಗಿಸಲಾಗುವುದು.

ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ವಿಜಾಪೂರ ಜಿಲ್ಲೆ, ವಿಜಾಪೂರ.

ಪಿ.ಆರ್. 589

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, ಪಾರ್ಕ್ ಹೌಸ್, ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಆರ್ (2) 425/2003-04/ಪಿಎಸ್‌ಸಿ, ದಿನಾಂಕ: 28ನೇ ಆಗಸ್ಟ್ 2003**

ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿನ 25 ಕಿರಿಯ ತರಬೇತಿ ಅಧಿಕಾರಿ (ಎಲೆಕ್ಟ್ರಿಷಿಯನ್) ಹುದ್ದೆಗಳ ಕುರಿತಂತೆ ಆಯೋಗದ ಅಧಿಸೂಚನೆ ಸಂಖ್ಯೆ: ಆರ್ (2) 357/2003-04/ಪಿಎಸ್‌ಸಿ ದಿನಾಂಕ: 14.8.2003 ರಲ್ಲಿ ಪ್ರಕಟಿಸಲಾಗಿರುವ ಅಂತಿಮ

ಆಯ್ಕೆಪಟ್ಟಿಯಲ್ಲಿನ ಮುಖ್ಯ ಪಟ್ಟಿಯ ಕ್ರಮ ಸಂಖ್ಯೆ 16 ರಲ್ಲಿನ ಅಭ್ಯರ್ಥಿಯ ಹೆಸರನ್ನು "CHANDRASHEKARAPPA. G" ಎಂಬ ಬದಲು "CHANDRASEKHARAPPA. G" ಎಂದು ತಿದ್ದಿ ಓದಿಕೊಳ್ಳುವುದು.

ಬಿ.ಎ. ಹರೀಶ್‌ಗೌಡ
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್. 590

## ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರವರ ಕಾರ್ಯಾಲಯ, ತುಮಕೂರು

### ಅಧಿಸೂಚನೆ

### ಕ್ರಮ ಸಂಖ್ಯೆ: 5000:2003, ದಿನಾಂಕ: 27ನೇ ಆಗಸ್ಟ್ 2003

ತುಮಕೂರು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯದ ಆವರಣದಲ್ಲಿ ಕೆಳಕಂಡ ವಿವರಗಳಿರುವ ನಿಯಮಾವಳಿಗಳಿಗೆ ಅನುಸಾರವಾಗಿ ಒಂದು ನಿರುಪಯುಕ್ತ ಅಂಬಾಸಿಡರ್ ಕಾರ್ ಸಂಖ್ಯೆ C.K.G.- 253 ನ್ನು ಮಾರಾಟಕ್ಕಾಗಿ ಅರ್ಹ ವ್ಯಕ್ತಿಗಳಿಂದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. (ವಾಹನ ಯಥಾಸ್ಥಿತಿಯಲ್ಲಿ)

**ಮಾರಾಟಕ್ಕಾಗಿ ಕಾದಿರಿಸಿರುವ ವಾಹನದ ವಿವರಗಳು**

ವಾಹನದ ಸಂಖ್ಯೆ : C.K.G - 253
ಮಾದರಿ : ಅಂಬಾಸಿಡರ್
ತಯಾರಾದ ವರ್ಷ : 1986

### ನಿಯಮಾವಳಿಗಳು

1. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವ ಟೆಂಡರ್‌ದಾರರು ರೂ. 5,000/- (ಐದು ಸಾವಿರ ರೂಪಾಯಿಗಳು) ಗಳನ್ನು ಭದ್ರತಾ ಠೇವಣಿಯಾಗಿ ಸಂದಾಯಮಾಡಬೇಕು. ಹೀಗೆ ಸಂದಾಯ ಮಾಡಲಾದ ಭದ್ರತಾ ಠೇವಣಿಯ ರಶೀತಿಯನ್ನು ತಮ್ಮ ಟೆಂಡರಿನ ಜೊತೆ ಲಗತ್ತಿಸಬೇಕು.
2. ಆಸಕ್ತಿಯುಳ್ಳ ಟೆಂಡರ್‌ದಾರರು ತಮ್ಮ ಟೆಂಡರುಗಳನ್ನು ಅದರ ಜೊತೆಯಲ್ಲಿ ಈ ಕಛೇರಿಯಲ್ಲಿ ಭದ್ರತಾ ಠೇವಣಿ ಸಂದಾಯ ಮಾಡಿದ ಬಗ್ಗೆ ರಶೀತಿಗಳನ್ನು ಈ ಕಛೇರಿಯಲ್ಲಿ ಸಲ್ಲಿಸಬೇಕು.
3. ಟೆಂಡರುಗಳನ್ನು ಎಲ್ಲಾ ಕೆಲಸದ ದಿನಾಂಕಗಳಂದು ಈ ಕಛೇರಿಯಲ್ಲಿ ಬೆಳಗಿನ 11 ಗಂಟೆಯಿಂದ ಸಾಯಂಕಾಲ 4 ಗಂಟೆಯವರೆಗಿನ ಅವಧಿಯಲ್ಲಿ ಸ್ವೀಕರಿಸಲಾಗುವುದು.
4. ಟೆಂಡರುಗಳನ್ನು ಸ್ವೀಕರಿಸುವ ಕಡೆಯ ದಿನಾಂಕ: 15.9.2003.
5. ಮೊಹರಾದ ಟೆಂಡರುಗಳನ್ನು 16.9.2003 ದಿನಾಂಕದಂದು ಸಂಜೆ 5 ಗಂಟೆಗೆ ಹೊರತೆಗೆದು ಪರಿಶೀಲಿಸಲಾಗುವುದು.
6. ಟೆಂಡರುಗಳನ್ನು ಸೀಲ್ ಮಾಡಿದ ಲಕೋಟೆಯಲ್ಲಿಯೇ ಸಲ್ಲಿಸಬೇಕು.
7. ಸೀಲ್ ಮಾಡಿದ ಲಕೋಟೆಯ ಮೇಲ್ಭಾಗದಲ್ಲಿ ತುಮಕೂರು ಜಿಲ್ಲಾ ನ್ಯಾಯಾಲಯದ ಆವರಣದಲ್ಲಿರುವ ನಿರುಪಯುಕ್ತವೆನಿಸಿದ C.K.G.-253 ಅಂಬಾಸಿಡರ್ ಕಾರ್ ಖರೀದಿ ಬಗ್ಗೆ ಸಲ್ಲಿಸಲಾದ ಟೆಂಡರ್ ಎಂದು ನಮೂದಿಸಿರಬೇಕು.
8. ಅಂಗೀಕರಿಸಲ್ಪಟ್ಟ ಟೆಂಡರ್‌ದಾರರು ಒಪ್ಪಿಗೆಯಾದ ದರದಲ್ಲಿ ಬಿಡ್ ಮಾಡಿದ ಬೆಲೆಯ ಶೇಕಡಾ 25% ಭಾಗದ ಹಣವನ್ನು ಸ್ಥಳದಲ್ಲೇ (ಈಗಾಗಲೇ ಸಲ್ಲಿಸಲಾದ ಭದ್ರತಾ ಠೇವಣಿಯನ್ನು ಹೊರತುಪಡಿಸಿ) ಸಂದಾಯ ಮಾಡಬೇಕಾಗುವುದು.
9. ಟೆಂಡರುಗಳನ್ನು ಒಪ್ಪಿಕೊಳ್ಳುವ ಇಲ್ಲವೇ ತಿರಸ್ಕರಿಸುವ ಸಂಪೂರ್ಣ ಅಧಿಕಾರ ಈ ಕೆಳಗೆ ಸಹಿ ಮಾಡಿರುವವರಿಗೆ ಇರುತ್ತದೆ.
10. ಟೆಂಡರ್‌ದಾರರು ಕಾನೂನು ರೀತ್ಯಾ ಎಲ್ಲಾ ಅಗತ್ಯಗಳನ್ನು ಪೂರೈಸಬೇಕು ಹಾಗೂ ಈಗ ಹಾಲಿ ಇರುವ ಕಾನೂನು ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಬೇಕು.
11. ಕಾರನ್ನು ಜಿಲ್ಲಾ ನ್ಯಾಯಾಲಯದ ಆವರಣದಲ್ಲಿ ಇರಿಸಲಾಗಿದ್ದು ಇಚ್ಛೆಯುಳ್ಳ ಬಿಡ್‌ದಾರರು ಯಾವುದೇ ಸರ್ಕಾರಿ ಕೆಲಸದ ದಿನಗಳಂದು ಬೆಳಿಗ್ಗೆ 10.30 ರಿಂದ ಸಂಜೆ 5.30 ರ ವೇಳೆಯಲ್ಲಿ ಪರೀಕ್ಷಿಸಬಹುದು.
12. ಟೆಂಡರ್ ಫಾರಂನಲ್ಲಿ ಟೆಂಡರ್‌ದಾರನು ತಾನು ಖರೀದಿಸಲು ಸಿದ್ದವಿರುವ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.
13. ಟೆಂಡರ್‌ಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
14. ಯಶಸ್ವಿ ಬಿಡ್‌ದಾರರು ಸಂಪೂರ್ಣ ಮೊತ್ತವನ್ನು ತುಮಕೂರು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರವರ ಕಛೇರಿಗೆ ಪಾವತಿಸಬೇಕು.
15. ವಾಹನವನ್ನು ಖರೀದಿಸಿ ಪೂರ್ಣ ಹಣ ಸಂದಾಯವಾದ ನಂತರ ತಮ್ಮ ವಶಕ್ಕೆ ಪಡೆದುಕೊಳ್ಳುವವರೆಗಿನ ವಾಹನದ ತೆರಿಗೆ ಮತ್ತು ಸೆಸ್‌ಗಳನ್ನು ಬಿಡ್‌ದಾರನೇ ಪಾವತಿಸಬೇಕು.
16. ಟೆಂಡರುಗಳನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ ಇಲ್ಲವೆ ತಿರಸ್ಕರಿಸುವ ಇಲ್ಲವೆ ಹರಾಜನ್ನು ಮುಂದೂಡುವ ಸಂಪೂರ್ಣ ಅಧಿಕಾರವನ್ನು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹೊಂದಿರುತ್ತಾರೆ.

ಜವ್ವಾದ್ ರಹೀಂ
ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,
ತುಮಕೂರು.

ಪಿ.ಆರ್. 591

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ) ರವರ ಕಛೇರಿ, ಚಿತ್ರದುರ್ಗ**

**ಸಂಕ್ಷಿಪ್ತ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಎ6.ರಸ್ತೆ ಬದಿ-ಸಿ.ಆರ್-38/2001-02, ದಿನಾಂಕ: 27ನೇ ಆಗಸ್ಟ್ 2003**

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ವಿಶ್ವ ಬ್ಯಾಂಕ್ ಸಹಕಾರಿ) ಹಂತ-2 ರಲ್ಲಿ ರಸ್ತೆಗಳ ಅಗಲೀಕರಣ ಸಂಬಂಧ ಕಾರಿಡಾರ್ ಆಫ್ ಇಂಪ್ಯಾಕ್ಟ್ ಒಳಗಡೆ ಕಟಾವು ಮಾಡಿರುವ ಮರಗಳ ಟಿಂಬರ್ ಮತ್ತು ಸೌದೆಯನ್ನು ಬಹಿರಂಗ ಹರಾಜು ಮಾಡುವ ಕುರಿತು.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿತ್ರದುರ್ಗ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಹಿರಿಯೂರು - ಬಳ್ಳಾರಿ ರಾಜ್ಯ ಹೆದ್ದಾರಿ ಅಗಲೀಕರಣ ಸಂಬಂಧ ಕಿ.ಮೀ. 19 ರಿಂದ 29 ರವರೆಗೆ ಕಟಾವು ಮಾಡಿದಾಗ ಬಂದಿರುವ ಮರಗಳ ಟಿಂಬರ್ ಮತ್ತು ಸೌದೆಯನ್ನು ಹಿರಿಯೂರು ವಲಯ ಕಛೇರಿ ಆವರಣದಲ್ಲಿ ದಾಸ್ತಾನು ಮಾಡಿರುವುದನ್ನು ದಿನಾಂಕ: **22.10.2003** ರಂದು ಮತ್ತು ಚಳ್ಳಕೆರೆ ಸಸ್ಯಕ್ಷೇತ್ರದಲ್ಲಿ ದಾಸ್ತಾನು ಮಾಡಿರುವುದನ್ನು ದಿನಾಂಕ: **23.10.2003** ರಂದು, ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಂದಾಗಲಿ ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಹಿರಂಗ ಹರಾಜನ್ನು ನಡೆಸಲು ನಿಗದಿಪಡಿಸಲಾಗಿದೆ.

ದಿನಾಂಕ: **22.10.2003** ರಂದು ಹಿರಿಯೂರು ವಲಯ ಕಛೇರಿ ಆವರಣದಲ್ಲಿ ಮತ್ತು ದಿನಾಂಕ: **23.10.2003** ರಂದು ಚಳ್ಳಕೆರೆ ಸಸ್ಯ ಕ್ಷೇತ್ರದಲ್ಲಿ ನಡೆಯುವ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ: **30.10.2003** ರಂದು ಹಿರಿಯೂರು ವಲಯ ಕಛೇರಿ ಆವರಣದಲ್ಲಿ ಮತ್ತು ದಿನಾಂಕ: **31.10.2003** ರಂದು ಚಳ್ಳಕೆರೆ ಸಸ್ಯ ಕ್ಷೇತ್ರದಲ್ಲಿ ಬಹಿರಂಗ ಹರಾಜು ನಡೆಸಲಾಗುವುದು. ನಂತರದ ಎರಡನೆಯ ಮರು ಹರಾಜನ್ನು ದಿನಾಂಕ: **6.11.2003** ರಂದು ಹಿರಿಯೂರು ವಲಯ ಕಛೇರಿ ಆವರಣದಲ್ಲಿ ಮತ್ತು ದಿನಾಂಕ: **7.11.2003** ರಂದು ಚಳ್ಳಕೆರೆ ಸಸ್ಯಕ್ಷೇತ್ರದಲ್ಲಿ ನಡೆಸಲಾಗುವುದು. ಈ ಹರಾಜುಗಳಿಗೆ ಪುನಃ ಯಾವುದೇ ರೀತಿಯ ಪ್ರಕಟಣೆ ಹೊರಡಿಸುವುದಿಲ್ಲ.

**ಅನುಸೂಚಿ**

| ಕ್ರ. ಸಂ. | ಮಾರಾಟಕ್ಕೆ ಇಡಲಾಗಿರುವ ಮರಮುಟ್ಟು ಹಾಗೂ ಸೌದೆ | | ಹರಾಜು ನಡೆಯುವ ಸ್ಥಳ | ಹರಾಜು ದಿನಾಂಕ | ಹರಾಜು ಮಾಡಲಾಗುವ ಸಮಯ |
|---|---|---|---|---|---|
| | ವಿವರ | ಪ್ರಮಾಣ ($M^3$ ನಲ್ಲಿ) | | | |
| 1 | ಟಿಂಬರ್ | 20.739 | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಹಿರಿಯೂರು ವಲಯ | 22.10.2003 | ಮಧ್ಯಾಹ್ನ 3.30 ಗಂಟೆಗೆ |
| 2 | ಸೌದೆ | 306.00 | | | |
| 1 | ಟಿಂಬರ್ | - | ಚಳ್ಳಕೆರೆ ಸಸ್ಯಕ್ಷೇತ್ರ, ಚಳ್ಳಕೆರೆ ವಲಯ | 23.10.2003 | ಮಧ್ಯಾಹ್ನ 3.30 ಗಂಟೆಗೆ |
| 2 | ಸೌದೆ | 1083.00 | | | |

**ಷರತ್ತುಗಳು**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಪ್ರತಿ ಯೂನಿಟ್‌ಗೆ ರೂ. 5000/- ಗಳ ಇ.ಎಂ.ಡಿ ಮೊತ್ತವನ್ನು ಠೇವಣಿಯಾಗಿಡತಕ್ಕದ್ದು.
2. ಯಶಸ್ವಿ ಬಿಡ್‌ದಾರರು ಹರಾಜಿನ ದಿನವೇ ಮಾರಾಟದ ಶೇಕಡ 50 ರಷ್ಟು ಹಣವನ್ನು ಮತ್ತು ಜಾರಿಯಲ್ಲಿರುವ ಪೂರ್ಣ ತೆರಿಗೆಗಳನ್ನೊಳಗೊಂಡು ಕಟ್ಟಲೇಬೇಕು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಜಮಾ ಮಾಡಿಕೊಳ್ಳಲಾಗುವುದು ಹಾಗೂ ಸದರಿ ಬಿಡ್‌ದಾರರ ಸ್ವಂತ ಜವಾಬ್ದಾರಿಯ ಮೇಲೆ ಖರೀದಿಸಿರುವ ಟಿಂಬರ್ ಹಾಗೂ ಸೌದೆಯನ್ನು ಮರು ಹರಾಜು ಮಾಡಲಾಗುವುದು. ಹರಾಜಿಗೆ ಇಟ್ಟಿರುವ ಟಿಂಬರ್ ಹಾಗೂ ಸೌದೆಯ ಪರಿಮಾಣವು ಹೆಚ್ಚು ಕಡಿಮೆ ವ್ಯತ್ಯಾಸವಾಗಬಹುದು ಅಂತಹುದಕ್ಕೆ ಯಾವುದೇ ರೀತಿಯ ದೂರುಗಳನ್ನು ಮಾನ್ಯ ಮಾಡುವುದಿಲ್ಲ.
3. ವರಮಾನ ತೆರಿಗೆಯನ್ನು ತೆರಿಗೆ ಸೆಕ್ಷನ್ - 216ಸಿ ಪ್ರಕಾರ ವಿಧಿಸಲಾಗುವುದು.
4. ಬಹಿರಂಗ ಹರಾಜಿನಲ್ಲಿ ಖರೀದಿಸಿದ ಟಿಂಬರ್ ಹಾಗೂ ಸೌದೆಯನ್ನು ಸ್ವಂತ ಖರ್ಚಿನಿಂದ ನಿಯಮಾನುಸಾರ ಆದಷ್ಟು ಬೇಗನೆ ಸಾಗಿಸಿಕೊಳ್ಳುವುದು.
5. ಯಶಸ್ವಿ ಬಿಡ್‌ದಾರರು ಬಹಿರಂಗ ಹರಾಜಿನ ದಿನವೇ ಮಾರಾಟದ ಹರಾಜು ಬೆಲೆಯ ಮೊತ್ತದಲ್ಲಿ ಶೇಕಡ 50 ರಷ್ಟನ್ನು ಮತ್ತು ಪೂರ್ಣ ತೆರಿಗೆಗಳನ್ನು ಪಾವತಿ ಮಾಡಿದ ನಂತರ ಉಳಿದ ಶೇಕಡ 50 ರಷ್ಟು ಮೊತ್ತವನ್ನು ಸ್ಥಿರೀಕರಣ ಆದೇಶ ಪಡೆದ ನಂತರ ಪಾವತಿಸತಕ್ಕದ್ದು.
6. ಇಲಾಖೆಯಿಂದ ಮಾಡಲ್ಪಟ್ಟಿರುವ ಟಿಂಬರ್ ಹಾಗೂ ಸೌದೆಯ ಪ್ರಮಾಣವನ್ನು ಅಖೈರವಾಗಿ ಒಪ್ಪಿಕೊಳ್ಳತಕ್ಕದ್ದು. ಮಾರಾಟ ಮಾಡುವ ಮುನ್ನ ಖರೀದಿಸಲು ಇಷ್ಟಪಡುವವರು ಟಿಂಬರ್ ಹಾಗೂ ಸೌದೆಯ ಅಳತೆ ಗುಣ ಪರಿಮಾಣಗಳನ್ನು ಪರಿಶೀಲಿಸಿಕೊಳ್ಳಬಹುದು. ಅನಂತರ ಬರುವ ದೂರುಗಳನ್ನು ಸ್ವೀಕರಿಸುವುದಿಲ್ಲ.
7. ಟಿಂಬರ್ ಹಾಗೂ ಸೌದೆಯನ್ನು ಎಲ್ಲಿ, ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.

